

SOME IMPORTANT VAHANAMS OF ANNUAL BRAHMOTSAVAM
CONDUCTED FROM 10-9-'83 TO 18-9-'83 AT TIRUMALA.





ಬಾಗಿಲನು ತೆರೆದು ಸೇವೆಯನು ಕೊಡೋ ಹರಿಯೇ
ಕೂಗಿದರು ಧ್ವನಿ ಕೇಳಲಿಲ್ಲವೆ ನರಹರಿಯೇ

ಪರಮಪದದೊಳಗೆ ವಿಷಧರನ ತಲ್ಪದಲಿ
ಸಿರಿಸಹಿತ ಕ್ಷೀರವಾರಧಿಯೊಳಿರಲು
ಕರಿರಾಜ ಕಷ್ಟದಲಿ ಆದಿಮೂಲಯೆಂದು
ಕರೆಯಲಾಕ್ಷಣ ಬಂದು ಒದಗಿದೆಯೋ ನರಹರಿಯೆ

ಕಡುಗೋಪದಿಂ ಖಳನು ಖಡ್ಗವನೆ ಪಿಡಿದು ನಿ
ನ್ನೊಡೆಯ ಎಲ್ಲಿಹನು ಎಂದು ನುಡಿಯೆ
ದೃಢಭಕುತಿಯಲಿ ಶಿಶುವು ಬಿಡದೆ ನಿನ್ನನು ಭಜಿಸೆ
ಸಡಗರದಿ ಸ್ತಂಭದಿಂದೊಡೆದೆ ನರಹರಿಯೆ

ಯಮಸುತನ ರಾಣಿಗೆ ಅಕ್ಷಯವಸನವ ಇತ್ತೆ
ಸಮಯದಲಿ ಅಜಮಿಳನ ಪೊರೆದೆ
ಸಮಯಾಸಮಯವುಂಟೆ ಭಕ್ತವತ್ಸಲ ನಿನಗೆ
ಕಮಲಾಕ್ಷ ಕಾಗಿನೆಲೆಯಾದಿ ಕೇಶವನೇ

- ಕನಕದಾಸರು

ಸಂದರ್ಶಿಸಿ! ಅನುಗ್ರಹೀತರಾಗಿರಿ!!

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ
# ತಿರುಚಾನೂರು



## ವಾರ್ಷಿಕ ಬ್ರಹ್ಮೋತ್ಸವಗಳು 1983
### ಕಾರ್ಯಕ್ರಮ ವಿವರ

| ದಿನಾಂಕ | ವಾರ | ಹಗಲು ಉತ್ಸವ | ರಾತ್ರಿ ಉತ್ಸವ |
|---|---|---|---|
| 31-11-83 | ಬುಧ | — | ಅಂಕುರಾರ್ಪಣೆ |
| 1-12-83 | ಗುರು | ಧ್ವಜಾರೋಹಣ | ಚಿಕ್ಕಶೇಷವಾಹನ |
| 2-12-83 | ಶುಕ್ರ | ಟಾಂಜಾನ್ ಉತ್ಸವ | ಹಂಸವಾಹನ |
| 3-12-83 | ಶನಿ | ಸಿಂಹವಾಹನ | ಮುತ್ತಿನ ಚಪ್ಪರವಾಹನ |
| 4-12-83 | ಭಾನು | ಕಲ್ಪವೃಕ್ಷವಾಹನ | ಸರ್ವಭೂಪಾಲವಾಹನ |
| 5-12-83 | ಸೋಮ | ಪಲ್ಲಕ್ಕಿ ಉತ್ಸವ | **ಗಜವಾಹನ** |
| 6-12-83 | ಮಂಗಳ | ಹನುಮದ್ವಾಹನ, ಸಂಜೆ ವಸಂತೋತ್ಸವ | ಗರುಡೋತ್ಸವ |
| 7-12-83 | ಬುಧ | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ |
| 8-12-83 | ಗುರು | **ರಥೋತ್ಸವ** | ಅಶ್ವವಾಹನ |
| 9-12-83 | ಶುಕ್ರ | ಪಲ್ಲಕ್ಕಿ, ತೀರ್ಥವಾರಿ | ಧ್ವಜಾವರೋಹಣ |

ಸೂಚನೆ: ಬ್ರಹ್ಮೋತ್ಸವ ಕಾಲದಲ್ಲಿ ದಿನವೂ ಪ್ರತ್ಯೇಕ ಕಾರ್ಯಕ್ರಮಗಳಿರುತ್ತವೆ. ತಿರುಚಾನೂರಿಗೆ ತಿರುಪತಿಯಿಂದ ನಿರಂತರ ಬಸ್ ಸೌಲಭ್ಯವಿದೆ. ತಿರುಚಾನೂರು ತಿರುಪತಿಯಿಂದ ಐದುಮೈಲು ದೂರದಲ್ಲಿದೆ.

**ತಿರುಮಲೆ ತಿರುಪತಿ ದೇವಸ್ಥಾನಗಳು.**

ನೀವೂ ಬನ್ನಿ, ನಿಮ್ಮವರನ್ನೂ ಕರೆತನ್ನಿ.




ಗೌರವ ಸಂಪಾದಕರು :
ಜಿ. ಕುಮಾರಸ್ವಾಮಿರೆಡ್ಡಿ ಐ.ಎ.ಎಸ್.

ಸಂಪಾದಕ :
ಕೆ. ಸುಬ್ಬಾರಾವ್, ಎಂ.ಎ.,

ಉಪಸಂಪಾದಕ :
ಬಿ. ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ :
ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲೆ ತಿರುಪತಿ ದೇವಸ್ಥಾನ
ತಿರುಪತಿ.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**


ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. —ಸಂ॥


ಸಂಪುಟ ೧೪] ನವಂಬರ್ ೧೯೮೩ [ಸಂಚಿಕೆ ೬


# ವಿಷಯಸೂಚಿ

# ಸಂಪಾದಕೀಯ

ದೀಪಾವಳಿಯೆನ್ನುತ್ತಲೇ ನಮಗೆ ಮೊದಲು ನೆನಪಿಗೆ ಬರುವುದು ಸತ್ಯಭಾಮಾವಿಜಯವೆನ್ನುವ ನರಕಾಸುರ ವಧೆಯ ಕಥೆ. ದೀಪಾವಳಿಗೂ ಈ ಕಥೆಗೂ ಸಂಬಂಧವಿಲ್ಲವೆನ್ನುವರು ಬಹುಮಂದಿಯಿದ್ದರೂ ಇವೆರಡನ್ನೂ ಕೂಡಿಸಿಯೇ ಹಬ್ಬ ಮಾಡುವುದು ಪರಂಪರೆಯಾಗಿ ಆಸೇತುಹಿಮಾಚಲ ಪರ್ಯಂತ ನಡೆದುಬಂದಿದೆ. ದೀಪಾವಳಿಯ ಮೊದಲದಿನಕ್ಕೆ ನರಕಚತುರ್ದಶಿಯೆಂಬ ಹೆಸರಿರುವುದು ಸಹ ಈ ವಾದವನ್ನು ಬೆಂಬಲಿಸುತ್ತದೆ.

ಚಾರಿತ್ರಿಕವಾಗಿ ಇವೆರಡಕ್ಕೂ ಸಂಬಂಧವಿದ್ದರೂ ಇಲ್ಲದಿದ್ದರೂ ಸಮಾಜಕ್ಕೆ ಈ ಕಥೆಯಿಂದ ಲಭಿಸುವ ಸಂದೇಶ ಮಹತ್ತರವಾದದ್ದು ಎನ್ನಿಸುತ್ತದೆ.

ಪ್ರಾಣಿಯು ಮನುಷ್ಯನಾಗಲು ಕಾರಣ ಮನವೆಂದೇ ಹೇಳಬಹುದು. 'ಮನ ಏವ ಮನಷ್ಯಾಣಾಂ ಕಾರಣ ಬಂಧ ಮೋಕ್ಷಯೋಃ' ಎಂಬಂತೆ ಅನೇಕ ಜೀವರಾಶಿಗಳಲ್ಲಿ ಮಾನವ ಮನೀಷಿಯಾಗಲು ಸಹ ಮನವೇ ಕಾರಣ. ದೈವದೊಂದಿಗೆ ಶಾಶ್ವತವಾಗಿ ಇರಬೇಕಾದ ಬುದ್ಧಿಜೀವಿಯು ಸಂತತ ಬದ್ಧಜೀವಿಯಾಗಲೂ ಮನವೇ ಕಾರಣ. ಮನ ಮಾರ್ಗವನ್ನು ತೋರಿದಲ್ಲಿ ಬುದ್ಧಿಜೀವಿ ನಡೆಯುವ ಈ ಮಾಯೆಯ ಮಾರ್ಗದಲ್ಲಿ ಬೀಜರೂಪದಲ್ಲಿರುವ ವಿಷಯ ವಾಸನೆಗಳು ಉದ್ಧೃತ ಹೊಂದಿ ಇಂದ್ರಿಯೋನ್ಮಾದನಾಗಿ ಪರಿಣಮಿಸುತ್ತವೆ. ದೇವನಿಂದ ಜೀವ ಬೇರೆಯಾಗಿ ನರನಾಗಿ ಬುದ್ಧಿ ಅತ್ಯಂತ ವಿಷಯಬದ್ಧವಾಗಿ ಆಸುರೀ ಪ್ರಕೃತಿಯನ್ನು ಹೊಂದಿ ಪಂಚಮುಖಮುರಾಸುರ ರೂಪವನ್ನು ಹೊಂದುತ್ತದೆ. ಪ್ರಾಣಮಿತ್ರರನ್ನು ಕಾಣುತ್ತದೆ. ಅಘಮೇಘಗಳ ಮೇಲೆ ಎಲ್ಲ ಲೋಕಗಳನ್ನೂ ಸುತ್ತಿ ಬರುವ ಈ ತಾತ್ಕಾಲಿಕ ವೈಚಿತ್ರ್ಯದಲ್ಲಿ ಭೂತ ಭವಿಷ್ಯದ ಪರಿವೆಯಿಲ್ಲದೆ ವ್ಯಾಪೀ ವರ್ತಮಾನದಲ್ಲಿ ನರನು ಮೇಲುಕೆಳಗಾಗಿ ದಿವಿಗೂ ಭುವಿಗೂ ಮಧ್ಯೆಯ ಲೋಕದವರಿಗೆಲ್ಲ ಪೀಡಾಕರನಾಗಿ ಮಾಡದ ಅತ್ಯಾಚಾರವೆಂಬುದೇ ಇರದಾಗುತ್ತದೆ. ಸಮಾಜಕ್ಕೆಲ್ಲ ಸಂಕ್ಷೋಭೆಯನ್ನುಂಟು ಮಾಡುತ್ತ ಜ್ಞಾನ ತೇಜೋತೀತ (ಪ್ರಾಗ್ಜ್ಯೋತಿಷ) ಪುರದಲ್ಲಿ ಸಂಸಾರಿಯಾಗುವ ನರರೂಪ ನರಕನನ್ನು ಸರ್ವಂಸಹ ಎನ್ನಿಸುವ ಹಡೆದ ತಾಯಿಯೂ ಕ್ಷಮಿಸಲಾಗದೆ ತಕ್ಕ ಪಾಠವನ್ನು ಕಲಿಸಲು ಕಾದಿರುವಂತಾಗುತ್ತದೆ. ಇದು ದೇವ–ಜೀವ–ನರ–ನರಕ ಪರಿಣಾಮ ಚರಿತ್ರೆ.

ನರಕ ಕಥೆಯಲ್ಲಿ ನಮಗೆ ಕಂಡು ಬರುವುದು ದೇವ ಜೀವೈಕ್ಯಯತ್ನ. ಈ ಮಾಯಾನಗರದಲ್ಲಿ ಅರಿವಿಲ್ಲದೆ ತಾನು ತಿಳಿದಿದ್ದೇ ತಿಳಿವೆಂಬ ಭ್ರಮೆಯಲ್ಲಿ ಒಂಬತ್ತು ಬಾಗಿಲುಗಳನ್ನೂ ಮುಚ್ಚಿ ಕುಳಿತುಕೊಂಡಿರುವುದರಿಂದ ಜೀವನು ಮೇಲೇರಿ ಬರಲಾರನೆಂದು ದೇವನೇ ಕೆಳಗಿಳಿದು ಬಂದ. ಮದೋಗ್ರವಾಂಛಾಮಹೋಗ್ರಸರ್ಪೋಪಶಮನಾದ ಗರುಡನ ಮೇಲೆ ಸರ್ವಂಸಹಾರೂಪಿಣೀಸತ್ಯಭಾಮಾಸಹಿತನಾಗಿ ಆ ದೈವವೇ ಇಳಿದು ಬಂದರೂ ಆತ್ಮವನ್ನು ಅದುಮಿಡುವ ವಾನರ ಬುದ್ಧಿಗೆ ಮಿತಿಯಾವುದು! ನರಕನಾದ ನರನಿಗೆ ಯಾವುದೂ ಲೆಕ್ಕವಿಲ್ಲ. ಮೇಲಾಗಿ ಇಷ್ಟುದಿನವೂ ತನ್ನ ಕಿತ್ತು ತಿನ್ನುತ್ತಿದ್ದ ಆರುಮಂದಿ ಆಪ್ತಮಿತ್ರರು, ಪಂಚಮುಖರೂ ಬೆಂಬಲ ನೀಡುವರೆಂಬ ಅಹಂ ಬೇರೆ. ಅದರಿಂದಾಗಿ ಗಲಭೆಯಾಗದೆ ಅನ್ಯಮಾರ್ಗವಿಲ್ಲ.

ಈ ಯುದ್ಧದಲ್ಲಿ ಪರಮಾತ್ಮನು ಮಾಡಿದ ಮೊದಲ ಕೆಲಸವೆಂದರೆ ಪಂಚೇಂದ್ರಿಯಮುಖನಾದ ಮುರಾಸುರನನ್ನು ಸಂಹರಿಸಿದ್ದು. ನಂತರ ಈ ನವದ್ವಾರ ಪುರದ ಸಪ್ತವ್ಯಸನಗಳ ಕಾವಲುಗಾರರನ್ನು ಬಲಿಹಾಕಿದ್ದು. ಕೃಷ್ಣನೇ ಯುದ್ಧ ಮಾಡಿದ. ಆದರೆ ಜೀವನನ್ನು ದೇವನಿಂದ ಬೇರ್ಪಡಿಸಿದ ಬಲವತ್ತರವಾದ ಪಾಂಚಭೌತಿಕ ಶಕ್ತಿ ಒಂದಿದೆ. ಅದೆಂದರೆ ಪ್ರಾರಬ್ಧ. ಈ ಮಾಯಾ ಮಾರ್ಗದಲ್ಲಿ ಜೀವ ಎಷ್ಟು ಮಾತು, ಮಂತ್ರ, ಕಲಿತರೂ ಆತ್ಮದ ಕೊನೆಯ ಆವರಣವಾಗಿ ಅಂಟಿಕೊಂಡಿರುವ ಈ ಪ್ರಾರಬ್ಧವನ್ನು ಪರಿಹರಿಸಲು ಪಂಚಭೂತಾತ್ಮಕವಾದ, ಯೋಗಭೋಗಗಳಿಗೆ ಆಶ್ರಯ ಕಾರಣವಾದ ಪೃಥ್ವೀತತ್ತ್ವ ಸತ್ಯಭಾಮಾರೂಪದಲ್ಲಿ ಪರಮಾತ್ಮನ ಜೊತೆಗೇ ನಿಂತು ಪ್ರಯತ್ನಿಸುತ್ತದೆ. ಆದರೂ ಕಲುಷಿತ ಬುದ್ಧಿಗೆ ತಿಳಿವೆಲ್ಲಿ? ಕೃಷ್ಣ ಪರಮಾತ್ಮ ತನ್ನ ಜ್ಞಾನಸುದರ್ಶನದಿಂದ ಜೀವಪ್ರಾರಬ್ಧವನ್ನು ನಾಶಮಾಡುತ್ತಾನೆ. ಆಗ ಅಹಂಶೂನ್ಯ ಆತ್ಮ ಅನಂತತೇಜೋರೂಪದಲ್ಲಿ ಪ್ರಕಾಶಿಸುತ್ತದೆ. ಇದು ಒಂದು ಜೀವಿಯ ಕಥೆಯಲ್ಲ. ಪ್ರತಿನರನಲ್ಲಿಯ ನರಕನ ಕಥೆ. ಎಂತಲೇ ಈ ದೀಪಾವಳಿ ನರಕದೂರರಾಗಿ ಬದುಕುವ ಬಯಕೆಯ ಜನಕ್ಕೆ ಜ್ಞಾಪಕ ಗಾಥಾವಳಿ, ಅದಕ್ಕೆ ಕಾರಣವಾದ ಆ ಪರಮಾತ್ಮನಿಗೆ ನರ ನೀಡುವ ಕೃತಜ್ಞತಾ ಭಾವಕಳಿಕಾವಳಿ. ★

ಜಕಾರೋ ಜನ್ಮ ವಿಚ್ಛೇದಃ
ಪಕಾರಃ ಪಾಪ ನಾಶಕಃ।
ತಸ್ಮಾಜ್ಜಪ ಇತಿ ಪ್ರೋಕ್ತೋ
ಜನ್ಮಪಾಪ ವಿನಾಶಕಃ॥

— ಅಗ್ನಿಪುರಾಣ

'ಜ' ಎಂದರೆ ಜನ್ಮವಿನಾಶಕವಾದುದು. 'ಪ' ಎಂದರೆ ಪಾಪಗಳನ್ನು ನಾಶಮಾಡುವುದು. ಯಾವುದು ನಮ್ಮ ಪಾಪಗಳನ್ನು ಕಳೆದು ಪುನರಾವೃತ್ತಿರಹಿತರನ್ನಾಗಿ ಮಾಡುವುದೋ ಅದೇ ಜಪವು.

'ಜಪ' ಎಂಬುದು ಒಂದು ಧಾತು. ಧಾತುವೆಂದ ಕೂಡಲೇ ಅದು ಒಂದು ಕ್ರಿಯೆಯಿಂದ ಹಾಗಾಯಿತು. ಅದರ ಅರ್ಥ ಹೀಗಿದೆ

'ಜಪವ್ಯಕ್ತಾಯಾಂ ವಾಚಿ'

ಅಂದರೆ ದೇವತಾಮಂತ್ರವೊಂದನ್ನೋ ಅಥವಾ ಪರಮಾತ್ಮನ ನಾಮವನ್ನೋ ಸ್ಪಷ್ಟವಾಗಿ ಉಚ್ಚರಿಸುವುದು ಅಥವಾ ಮನಸ್ಸಿನಲ್ಲಿ ಉಚ್ಚರಿಸುವುದು, ಇಲ್ಲವೇ ಒಂದೇ ಮನಸ್ಸಿನಿಂದ ಪಠಣ ಮಾಡುವುದು. — ಇವೆಲ್ಲವೂ ಜಪವೆನಿಸಿಕೊಳ್ಳುವುದು.

ಜಪದ ಹಿರಿಮೆ: ಜಪಮಾಡುವ ಕ್ರಮವು ವಿಶ್ವದ ಎಲ್ಲ ಧರ್ಮದವರಲ್ಲಿಯೂ, ಎಲ್ಲ ಸಂಪ್ರದಾಯದವರಲ್ಲಿಯೂ ಆಧ್ಯಾತ್ಮಿಕ ಸಾಧನೆಯ ಅಂಗವಾಗಿದೆ. ವಿಗ್ರಹಾರಾಧನೆಯಿಲ್ಲದಿರುವ ಅನೇಕ ಮತಗಳಲ್ಲಿ ಕೂಡ ಜಪಾನುಷ್ಠಾನವಿದೆ. ಇದರ ಮಹಿಮೆಯಿಂದಲೇ ಇತ್ತೀಚಿನ ಮಹಾಪುರುಷರು ನಮ್ಮ ಕಣ್ಣೆದುರಿನಲ್ಲಿಯೇ ಅನೇಕ ಸಿದ್ಧಿಗಳಿಂದ ವಿಜೃಂಭಿಸಿದ ಹಾಗೂ ವಿಜೃಂಭಿಸುತ್ತಿರುವುದು ಸುವೇದ್ಯ. ಪತಿತರನ್ನು ಉದ್ಧಾರ ಮಾಡಲು ಅನೇಕ ವಿಭೂತಿ ಪುರುಷರು ಜೀವನ್ಮುಕ್ತರಾದಾಗ್ಯೂ ಸತ್ಸಂಕಲ್ಪಮಾತ್ರದಿಂದ ಪುನಃ ಇಲ್ಲಿ ಆವಿರ್ಭವಿಸಿ ಪತಿತರನ್ನೂ ಸಹ ಸನ್ಮಾರ್ಗಿಗಳನ್ನಾಗಿ ಮಾಡುತ್ತಾರೆ.

ಕಲಿಯುಗದಲ್ಲಿ 'ಜಪ' ಅಥವಾ 'ನಾಮ ಸಂಕೀರ್ತನೆ'ಯೇ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಳ್ಳಲು ಸುಲಭಮಾರ್ಗವೆಂದು ಅನೇಕ ಮಹನೀಯರು ಸಾರಿದ್ದಾರೆ. ಉಳಿದ ಮೂರು ಯುಗಗಳಿಗಿಂತ ಈ ಯುಗದಲ್ಲಿ ಮಾನವನ ಆಯುಃಪ್ರಮಾಣ ಅಲ್ಪ. ಅಷ್ಟು ಅಲ್ಪ ಅವಧಿಯಲ್ಲಿ ತಪಸ್ಸು — ಯಜ್ಞಯಾಗಾದಿಗಳಿಂದ ಸಾಕ್ಷಾತ್ಕಾರ ಹೊಂದುವುದು ಕಷ್ಟಸಾಧ್ಯ. ಆದ್ದರಿಂದಲೇ ಮಹನೀಯರು ಹೀಗೆ ಹೇಳಿದ್ದಾರೆ.

ಮಹತಾ ಪುಣ್ಯ ಪಣ್ಯೇನ
ಕ್ರೀತೇಯಂ ಕಾಯ ನೌಃ ತ್ವಯಾ।
ಪಾರಂ ದುಃಖೋದಧೇಃ ಗಂತುಂ
ತರಯಾವನ್ನ ಭಿದ್ಯತೇ॥

ಅತಿಶಯವಾದ ನಮ್ಮ ಪುಣ್ಯದ ವಿನಿಮಯದಿಂದ ಈ ದೇಹವೆಂಬ ದೋಣಿಯನ್ನು ಆ ಪರಮಾತ್ಮನಿಂದ ಕೊಂಡುಕೊಂಡಿದ್ದೇವೆ. ಈ ದೋಣಿಯು ಬಿರುಗಾಳಿಗೆ ಸಿಕ್ಕಿ ಸೀಳಿಹೋಗುವುದರೊಳಗಾಗಿ ದುಃಖವೆಂಬ ಸಂಸಾರ ಸಮುದ್ರವನ್ನು ದಾಟಬೇಕು. ಈ ಸಂಸಾರವೆಂಬ ಘೋರ ಸಮುದ್ರವನ್ನು ದಾಟಲು ಇರುವ ಮಾರ್ಗವೆಂದರೆ 'ಜಪಯೋಗ'. ಜಪದಿಂದ ಸಾಕ್ಷಾತ್ಕಾರ ಸುಲಭ ಸಾಧ್ಯ.

ಪೂಜಾಕೋಟಿ ಸಮಂ ಸ್ತೋತ್ರಂ
ಸ್ತೋತ್ರ ಕೋಟಿಸಮೋ ಜಪಃ।

ಎಂದು ಹೇಳಿದ್ದಾರೆ. ಅಂದರೆ ದೇವರನ್ನು ಕೋಟಿ ಆವೃತ್ತಿ ಪೂಜಿಸಿದರೆ ಅದು ಒಂದು ಸ್ತೋತ್ರಕ್ಕೆ ಸಮವಾಗುತ್ತದೆ. ಅಂತಹ ಕೋಟಿ ಸ್ತೋತ್ರಕ್ಕೆ ಒಂದು ಜಪವು ಸಮವೆಂದರೆ ಜಪದ ಹಿರಿಮೆಯೆಷ್ಟೆಂಬುದು ಸುವೇದ್ಯ.

# ಜಪಯೋಗ

ಅನೇಕ ಪುಣ್ಯಪುರುಷರು 'ನಾಮಜಪ'ದಿಂದಾಗುವ ತಮ್ಮ ಅನುಭವಾಮೃತವನ್ನು ಹೊರಗೆಡಹಿದ್ದಾರೆ. ಜಪಯೋಗಸಾಧನೆಯಿಂದ ದುರಾಚಾರಿಯು ಧರ್ಮಾತ್ಮನಾಗುವನೆಂದು ಸಂತ ಏಕನಾಥರು ಹೇಳಿದ್ದಾರೆ. ಈ ಹೇಳಿಕೆಗೆ ಕ್ರೌಂಚಾಟವಿಯಲ್ಲಿ ಚೋರನಾಗಿದ್ದ ಪೂರ್ವಾ — ಶ್ರಮದ ವಾಲ್ಮೀಕಿಯೇ ಉತ್ತಮ ಉದಾಹರಣೆ.

ಈ ಜಪಕ್ಕೆ ಶ್ರಮ — ಖರ್ಚು ಎರಡೂ ಇಲ್ಲವೆಂದು ಸಂತಮೀರಾಬಾಯಿಯವರ ಹೇಳಿಕೆ. ಸಂತ ಜ್ಞಾನೇಶ್ವರರು "ಜಪ ನೋಡುವುದಕ್ಕೆ ಸುಲಭ. ಆದರೂ ಜನ್ಮ ಜನ್ಮಾಂತರದ ಪುಣ್ಯವಿದ್ದರೇನೇ ನಾಲಗೆ ನುಡಿಯುವುದು" ಎಂದಿದ್ದಾರೆ.

ಕಠಿಣಪ್ರಾಣಾಯಾಮ ಹಾಗೂ ಧ್ಯಾನಗಳಿಂದ ಉದ್ಬೋಧನೆಯಾಗುವ ಕುಂಡಲಿನೀ ಶಕ್ತಿಯು ಹನ್ನೆರಡು ಕೋಟಿ ನಾಮಜಪದಿಂದ ಸಾಧ್ಯವೆಂದು ಟೇಂಬೆ ಮಹಾರಾಜರು ಹೇಳಿದ್ದಾರೆ. ಒಂದೊಂದು ಕೋಟಿ ಜಪಕ್ಕೆ ಒಂದೊಂದು ಸ್ಥಾನ ಶುದ್ಧವಾಗಿ ವಿಕಲ್ಪವಳಿದು, ಸ್ವಪ್ನಗಳಲ್ಲಿ ದಿವ್ಯ ದರ್ಶನಗಳಾಗಿ, ಸಗುಣ ಸಾಕ್ಷಾತ್ಕಾರ, ಶ್ರೀ



ಗುರುವಿನ ಅನುಗ್ರಹ ದೊರೆತು ಕೃತಕೃತ್ಯತೆಯು ಪ್ರಾಪ್ತವಾಗುವುದು ಎಂದಿದ್ದಾರೆ.

ಮಹಾತ್ಮಾ ಗಾಂಧೀಜಿಯವರು "ನಾಮಜಪ ಆತ್ಮವನ್ನು ಪರಿಶುದ್ಧಗೊಳಿಸುವ ದಿವ್ಯಗಂಗೆ, ಹೇಡಿತನವನ್ನು ಜಯಿಸುವ ವಜ್ರಾಯುಧ-ದುರ್ಭಾವನೆಗಳನ್ನು ಭಸ್ಮ ಮಾಡುವ ವಡಬಾಗ್ನಿ" ಎಂದಿದ್ದಾರೆ.

ಜಪ ಮಾಡಿದವನನ್ನು ಸಂರಕ್ಷಿಸುತ್ತೇನೆಂದು ಶ್ರೀ ಕೃಷ್ಣಪರಮಾತ್ಮನು ಭಗವದ್ಗೀತೆಯಲ್ಲಿ ತಾನೇ ಉದ್ಘೋಷಿಸಿದ್ದಾನೆ.

ಅನನ್ಯಾಶ್ಚಿಂತಯಂತೋ ಮಾಂ
ಯೇಜನಾಃ ಪರ್ಯುಪಾಸತೇ।
ತೇಷಾಂ ನಿತ್ಯಾಭಿಯುಕ್ತಾನಾಂ
ಯೋಗಕ್ಷೇಮಂ ವಹಾಮ್ಯಹಂ॥

ಯಾರು ನನ್ನನ್ನೇ ಅನನ್ಯ ಶ್ರದ್ಧಾಭಕ್ತಿಗಳಿಂದ ಜಪಿಸುತ್ತಾರೋ, ಯಾರು ನನ್ನನ್ನೇ ಉಪಾಸಿಸುತ್ತಾರೋ ಅಂತಹವರೊಡನೆ ನಾನಿರುತ್ತೇನೆ. ನಮ್ಮ ಯೋಗಕ್ಷೇಮದ ಹೊಣೆಯನ್ನೇ ಹೊರುವ ಆ ಪರಮಾತ್ಮನನ್ನು ಜಪಿಸಲು ನಮಗೇಕೆ ತಾತ್ಸಾರ?

ಯೋಗಸಾಧನೆಗೆ ಅನೇಕ ಮಾರ್ಗಗಳಿವೆ, ನಿಜ. ಆದರೆ ಜ್ಞಾನಯೋಗ ಮಂದಬುದ್ಧಿಯವರಿಗೆ ಸಾಧ್ಯವಿಲ್ಲ. ಕರ್ಮಯೋಗ ನಿಷ್ಕಾಮ ಕರ್ಮಿಗಳಿಗೆ ಮಾತ್ರ ಸಾಧ್ಯ. ಭಕ್ತಿಯೋಗ ಭಾವನಾಸಾಮರ್ಥ್ಯವುಳ್ಳ ನಿರ್ಮಲಾತ್ಮರಿಗೆ ಮೀಸಲು, ರಾಜಯೋಗ ದೃಢಮನಸ್ಕರಿಗೆ ಮಾತ್ರ ಬಗ್ಗುತ್ತದೆ. ಆದರೆ ಈ ಜಪಯೋಗದಲ್ಲಿಯ ಸುಲಭಾಚರಣೆಯ ಮಾರ್ಗ ಎಲ್ಲರಿಗೂ ಬಗ್ಗತಕ್ಕದ್ದಾಗಿದೆ. ಜಪಿಸಬೇಕೆಂಬ ಮನಸ್ಸೊಂದಿದ್ದರಾಯಿತು. ಆದ್ದರಿಂದಲೇ ಪೂರ್ವಾಚಾರ್ಯರು,

ಮನ ಏವ ಮನುಷ್ಯಾಣಾಂ
ಕಾರಣಂ ಬಂಧ ಮೋಕ್ಷಯೋಃ

ಶ್ರೀ ಕೆ. ಕೇಶವಮೂರ್ತಿ

## ಜಪದ ವಿವಿಧ ರೀತಿಗಳು

ಜಪದಲ್ಲಿ ಅವರವರ ಇಷ್ಟಾರ್ಥಕ್ಕೆ ಸಂಬಂಧಿಸಿದಂತೆ ಹಲವು ಪ್ರಕಾರಗಳಿವೆ.

೧. ನಿತ್ಯಜಪ: ಗಾಯತ್ರೀ ಜಪವೇ "ನಿತ್ಯಜಪ". ಪ್ರತಿ ದಿನ ದೇಹಾರೋಗ್ಯಕ್ಕಾಗಿ— ಸ್ನಾನ, ಆಹಾರ, ವ್ಯಾಯಾಮ, ವಿಶ್ರಾಂತಿ ಹೇಗೆ ಅವಶ್ಯಕವೋ ಆಧ್ಯಾತ್ಮ ಉನ್ನತಿಗಾಗಿ ನಿತ್ಯಜಪವೂ ಅಷ್ಟೇ ಅವಶ್ಯಕ. ಇದರಿಂದ ಹಂತಹಂತವಾಗಿ ಆಂತರಿಕ ಆತ್ಮಶಕ್ತಿ ವಿಕಾಸವಾಗುತ್ತದೆ.

೨. ನೈಮಿತ್ತಿಕ ಜಪ: ವಿಶೇಷ ದಿನಗಳಲ್ಲಿ ವಿಶೇಷ ಆರಾಧನೆಗಾಗಿ ಆಚರಿಸುವ ಜಪಕ್ಕೆ 'ನೈಮಿತ್ತಿಕ ಜಪ'ವೆಂದು ಹೆಸರು. ಅಮಾವಾಸ್ಯೆ, ಪೂರ್ಣಿಮಾ, ಸಂಕ್ರಮಣ, ಗ್ರಹಣ, ಮೊದಲಾದ ಪರ್ವಕಾಲಗಳಲ್ಲಿಯೂ, ನವರಾತ್ರಿ, ಕೃಷ್ಣಾಷ್ಟಮಿ, ಶಿವರಾತ್ರಿ ಮತ್ತು ವ್ರತಕಾಲದಲ್ಲಿ ಇದನ್ನು ಆಚರಿಸುವ ಕ್ರಮವಿದೆ.

೩. ಕಾಮ್ಯಜಪ: ಇಷ್ಟಾರ್ಥಸಿದ್ಧಿಗಾಗಿ ಮಾಡುವ ಜಪ. ಉದಾಹರಣಾರ್ಥವಾಗಿ ಪುತ್ರಸಂತಾನ, ವಿವಾಹ, ಆರೋಗ್ಯಲಾಭ, ಧನಾಪೇಕ್ಷೆಗಳಿಂದ ಮಾಡುವ ಜಪ. ನವಗ್ರಹ ಜಪ, ಮೃತ್ಯುಂಜಯ ಜಪ, ಪರ್ಜನ್ಯಜಪ ಇತ್ಯಾದಿ.

೪. ಪ್ರಾಯಶ್ಚಿತ್ತ ಜಪ: ಹೆಸರೇ ತಿಳಿಸುವಂತೆ, ತಿಳಿದೋ, ತಿಳಿಯದೆಯೋ ಮಾಡಿದ ತಪ್ಪಿನ ದೋಷನಿವಾರಣೆಗಾಗಿ ಮಾಡುವ ಜಪವೇ 'ಪ್ರಾಯಶ್ಚಿತ್ತ ಜಪ'. ನಾವು ನಿತ್ಯಾರ್ಚನೆ ಅಥವಾ ವ್ರತಗಳ ಕೊನೆಯಲ್ಲಿ ಮಾಡುವ 'ಶ್ರೀ ಅಚ್ಯುತಾನಂತ' ಜಪವು ಈ ಬಗೆಯದು.

"ಮಧ್ಯೇಮಂತ್ರತಂತ್ರ ಸ್ವರವರ್ಣ ನ್ಯೂನಾತಿರಿಕ್ತ ಲೋಪದೋಷ ಪ್ರಾಯಶ್ಚಿತ್ತಾರ್ಥಂ ನಾಮತ್ರಯ ಶ್ರೀ ಅಚ್ಯುತಾನಂತ ಮಹಾಮಂತ್ರ ಜಪಂ ಕರಿಷ್ಯೇ" ಎಂದು ಸಂಕಲ್ಪ ಮಾಡುತ್ತೇವೆ.

೫. ಅಚಲ ಜಪ: ಚಲನೆ ಮಾಡದೆ ಏಕಾಸನದಲ್ಲಿ ಕುಳಿತು ದಿನ, ವಾರ, ಮಾಸಪರ್ಯಂತ ಮಾಡುವ ಜಪ.

೬. ಚಲಜಪ: ಇದು ಮೇಲೆ ಹೇಳಿದ ಜಪಕ್ಕೆ ವಿರುದ್ಧವಾದುದು. ಓಡಾಡುತ್ತಾ, ಕೆಲಸ ಮಾಡುತ್ತಾ, ಯಾತ್ರೆ ಮಾಡುತ್ತಾ ಮಾಡುವ ಜಪ. ಆದರೆ ಮನಸ್ಸು ಮಾತ್ರ ಮಂತ್ರದ ಮೇಲಿರಬೇಕು. ಮಂತ್ರಜಪವು ಯಾಂತ್ರಿಕವಾಗ ಬಾರದು.

೭. ಅಖಂಡಜಪ: ಇದೂ ಸಹ ಅಚಲಜಪದಂತೆಯೇ. ಒಬ್ಬರೂ ಮಾಡಬಹುದು. ಪರಸ್ಪರ ಸಹಾಯದಿಂದಲೂ ಒಂದು ನಿಮಿಷವೂ ಬಿಡುವು ಕೊಡದಂತೆ ಮಾಡುವ ಜಪವೇ 'ಅಖಂಡ ಜಪ'.

೮. ಪ್ರದಕ್ಷಿಣ ಜಪ: ದೇವಾಲಯ, ಈಶ್ವರಲಿಂಗ, ಮಹಾತ್ಮರ ಸಮಾಧಿ, ಅಶ್ವತ್ಥ ವೃಕ್ಷಗಳನ್ನು ಪ್ರದಕ್ಷಿಣೆ ಮಾಡುವಾಗ ಆಚರಿಸುವ ಜಪ.

ಉದಾಹರಣೆಗಾಗಿ ಅಶ್ವತ್ಥವೃಕ್ಷವನ್ನು ಪ್ರದಕ್ಷಿಣೆ ಮಾಡುವಾಗ ಈ ಮಂತ್ರವನ್ನು ಜಪಿಸುತ್ತೇವೆ.

ಮೂಲತೋ ಬ್ರಹ್ಮರೂಪಾಯ ಮಧ್ಯತೋ ವಿಷ್ಣುರೂಪಿಣೇ ।
ಅಗ್ರತಃ ಶಿವರೂಪಾಯ ವೃಕ್ಷರಾಜಾಯತೇ ನಮಃ ।

೯. ಅಜಪಾಜಪ: ಇದಕ್ಕೆ 'ಹಂಸ ಜಪ'ವೆಂದೂ ಹೆಸರು. ಪ್ರತಿಯೊಬ್ಬರೂ ಒಂದು ದಿನಕ್ಕೆ ೨೧,೬೦೦ ಬಾರಿ ಉಸಿರಾಡುತ್ತೇವೆ. ಉಚ್ಛ್ವಾಸ ಸಮಯದಲ್ಲಿ 'ಸೋ' ಎಂದೂ, ನಿಃಶ್ವಾಸ ಸಮಯದಲ್ಲಿ 'ಹಂ' ಎಂದೂ ತನ್ನಷ್ಟಕ್ಕೆ ತಾನೇ ಈ ಜಪ ನಡೆಯುತ್ತಿರುತ್ತದೆ. (ಮುಂದಿನ ಪುಟ ನೋಡಿ)

ಎಂದು ಹೇಳಿದ್ದಾರೆ. ಅಂದರೆ ನಮ್ಮ ಇಹಲೋಕದ ಬಂಧನಕ್ಕಾಗಲೀ ಅಥವಾ ಮೋಕ್ಷಕ್ಕಾಗಲೀ ನಮ್ಮ ನಮ್ಮ ಮನಸ್ಸೇ ಕಾರಣ. ಅಂತಹ ಮನಸ್ಸನ್ನು ಒಂದೆಡೆ ನಿಲ್ಲಿಸಿ 'ಜಪ' ಮಾಡಬೇಕು.

"ಜಿಹ್ವೇ ಶ್ರೀ ಕೃಷ್ಣಮಂತ್ರಂ — ಜಪಜಪ ಸತತಂ ಜನ್ಮ ಸಾಫಲ್ಯಮಂತ್ರಂ" ಎಂದು ಮುಕುಂದಮಾಲಾ ಸ್ತೋತ್ರದಲ್ಲಿ ನಿರೂಪಿಸಿದ್ದಾರೆ. ಅಂದರೆ "ಎಲೈ ನಾಲಗೆಯೇ ಸತತವೂ ಶ್ರೀ ಕೃಷ್ಣನಾಮ ಮಂತ್ರ ಜಪಿಸಿ ನಿನ್ನ ಜನ್ಮವನ್ನು ಸಾರ್ಥಕ ಮಾಡಿಕೊ".

"ಯಜ್ಞಾನಾಂ ಜಪಯಜ್ಞೋಽಸ್ಮಿ" ಎಂಬುದು ಗೀತೆಯ ವಿಭೂತಿಯೋಗದ ಇಪ್ಪತ್ತೈದನೇ ಶ್ಲೋಕ. ಪರಮಾತ್ಮನು ತನ್ನ ವಿಭೂತಿಯನ್ನು ಅರ್ಜುನನಿಗೆ ವಿವರಿಸುತ್ತಾ ಯಜ್ಞಗಳಲ್ಲಿ ಜಪಯಜ್ಞವು ನಾನು; ಅಂದರೆ ಯಜ್ಞಗಳಲ್ಲೆಲ್ಲಾ ಜಪಯಜ್ಞವು ಸರ್ವಶ್ರೇಷ್ಠವು" ಎಂದು ಹೇಳಿದ್ದಾನೆ. ಯಜ್ಞವೆಂದರೆ ಆರಾಧನೆ, ಪೂಜೆ, ಅರ್ಚನೆ.

ಜಪದಲ್ಲಿ ಮೂರು ಕ್ರಮಗಳಿವೆ. ಗಟ್ಟಿಯಾಗಿ ಬೀಜಮಂತ್ರವನ್ನೋ ಅಥವಾ ದೇವತಾ ನಾಮವನ್ನೋ ಸ್ಮರಣೆ ಮಾಡುವುದಕ್ಕೆ 'ವೈಖರೀ' ಎಂತಲೂ, ತುಟಿಗಳು ಅಲುಗಾಡುತ್ತಿದ್ದರೂ ಶಬ್ದವು ಹೊರಗೆ ಬಾರದೇ ಇರುವ ಕ್ರಮಕ್ಕೆ 'ಉಪಾಂಶು'ವೆಂತಲೂ ತುಟಿಗಳನ್ನು ಅಲುಗಾಡಿಸದೆ ಮನಸ್ಸಿನಲ್ಲಿಯೇ ಉಚ್ಚರಿಸುವ ಕ್ರಮಕ್ಕೆ 'ಮಾನಸೀ ಜಪ'ವೆಂತಲೂ ಕರೆಯುವರು. ವೈಖರೀ ಜಪಕ್ಕಿಂತ ಹತ್ತು ಪಾಲು ಗುಣವುಳ್ಳದ್ದು ಉಪಾಂಶು. ಉಪಾಂಶುವಿಗಿಂತ ನೂರು ಪಟ್ಟು ಗುಣವುಳ್ಳದ್ದು ಮಾನಸೀಜಪ. ಆದ್ದರಿಂದ ಜಪವನ್ನು ಮನಸ್ಸಿನಲ್ಲಿಯೇ ಜಪಿಸುವುದುತ್ತಮ.

ಜಪಮಾಡುವ ಸ್ಥಳವು ಪರಿಶುದ್ಧವಾದ ಕೋಣೆ, ನದೀತೀರ, ದೇವಾಲಯ, ಸಂಸ್ಕಾರ ಪಡೆದ ಅಶ್ವತ್ಥ ಅಥವಾ ಔದುಂಬರ ವೃಕ್ಷ ಆಗಿರಬಹುದು. ಏಕಾಗ್ರತೆಗೆ ಭಂಗ ಬರುವ ಸ್ಥಳವಾಗದಿದ್ದರಾಯಿತು. ಈ ದೃಷ್ಟಿಯಿಂದ ಸ್ವಗೃಹದ ದೇವಾಲಯ ಶ್ರೇಷ್ಠವಾದುದು ಸ್ವಚ್ಛವಾದ ಈ ಗೃಹದಲ್ಲಿ ಉಪಾಸನವನ್ನು ಹಾಕಿ ಕುಳಿತುಕೊಳ್ಳಬೇಕು. ಜಪವನ್ನು ಬರಿಯ ನೆಲದ ಮೇಲೆ ಕುಳಿತು ಮಾಡಬಾರದು. ಕಾರಣ ಆಧ್ಯಾತ್ಮಸಾಧಕನ ಶರೀರದಿಂದ ಸಾಧನಾ ಸಮಯದಲ್ಲಿ ವಿದ್ಯುಚ್ಛಕ್ತಿಯು ಹರಿಯುತ್ತಿರುತ್ತದೆ. ಈ ಶಕ್ತಿಯು ಭೂಮಿಗೆ ಹೋಗಬಾರದು. ಆದ್ದರಿಂದ ವಿದ್ಯುನ್ನಿರೋಧಕವಾದ ದರ್ಭಾಸನ, ಅದರ ಮೇಲೆ ಉಣ್ಣೆಯ ಅಥವಾ

ಶುದ್ಧವಾದ ಹತ್ತಿ ಬಟ್ಟೆಯನ್ನು ಹಾಸಿ ಅದರ ಮೇಲೆ ಕುಳಿತುಕೊಳ್ಳಬೇಕು. ಅನುಕೂಲವಿದ್ದವರು ಕೃಷ್ಣಾಜಿನ ಅಥವಾ ವ್ಯಾಘ್ರಾಜಿನಗಳನ್ನುಪಯೋಗಿಸಬಹುದು. ಯಾವುದೂ ಸಿಗದಿದ್ದರೆ ಚಾಪೆಯ ಮೇಲೆ ಕುಳಿತುಕೊಂಡು ಜಪವನ್ನಾಚರಿಸಬಹುದು. ಈ ಆಸನವು ಪೂರ್ವ ಇಲ್ಲವೇ ಉತ್ತರಾಭಿಮುಖವಾಗಿರಬೇಕು. ಹೆಚ್ಚು ಎತ್ತರವೂ, ಹೆಚ್ಚು ತಗ್ಗೂ ಆಗಿರಬಾರದು.

"ನಾತ್ಯುಚ್ಛಿತಂ ನಾತಿ ನೀಚಂ ಚೈಲಾಜಿನ ಕುಶೋತ್ತರಂ..." ಎಂಬುದು ಆರ್ಯವಾಣಿ. ಜಪಕ್ಕೆ ಕುಳಿತುಕೊಳ್ಳುವಾಗ ಪತಂಜಲಿಗಳು ಅಧ್ಯಾತ್ಮಸಾಧನೆಗಾಗಿ ಹೇಳಿರುವ ಪದ್ಮಾಸನ, ಸ್ವಸ್ತಿಕಾಸನ, ವಜ್ರಾಸನ, ಭದ್ರಾಸನ, ವೀರಾಸನ ಮತ್ತು ಸಿದ್ಧಾಸನಗಳಲ್ಲಿ ಯಾವುದಾದರೊಂದನ್ನು ಆರಿಸಿಕೊಂಡು ಆ ಆಸನದಲ್ಲಿ ಆಸೀನರಾಗಬೇಕು. ಈ ಮೇಲೆ ಹೇಳಿರುವ ಯಾವ ಆಸನವೂ ಆಗಗಿದ್ದರೆ,

"ತತ್ರಸ್ಥಿರ ಸುಖಮಾಸನಂ''

ಎಂದಿದ್ದಾರೆ. ಅಂದರೆ ಸ್ಥಿರವಾಗಿಯೂ, ಸುಖಕರವಾಗಿಯೂ ಇರುವ ಆಸನದಲ್ಲಿ ಕುಳಿತುಕೊಳ್ಳಬೇಕು. ನಮಗೆ ಒಗ್ಗದಿರುವ ಆಸನಸಾಧನೆಗೆ ಹೋಗಿ ವೈನೋವಾಗಿ ಮನಸ್ಸಿನ ಏಕಾಗ್ರತೆಗೆ ಭಂಗತಂದುಕೊಳ್ಳಬಾರದು, ನಿತ್ಯವೂ ಒಂದೇ ಆಸನದಲ್ಲಿ ಕುಳಿತುಕೊಳ್ಳಬೇಕೇ ವಿನಃ ಆಸನಗಳನ್ನು ಪದೇ ಪದೇ ಬದಲಾಯಿಸುತ್ತಿರಬಾರದು. ಇನ್ನು ಕುಳಿತುಕೊಳ್ಳುವ ಭಂಗಿ,

"ಸಮಂ ಕಾಯಶಿರೋಗ್ರೀವಂ''

ಎಂದು ಹೇಳಿದ್ದಾರೆ. ಅಂದರೆ ಶರೀರ ಮತ್ತು ತಲೆ ನೇರವಾಗಿರಬೇಕು. ಮೇರು ದಂಡ ನೆಟ್ಟಗಿರಬೇಕು.

ಜಪಪೂರ್ವದಲ್ಲಿ ಶರೀರಬಾಧಾದಿ ನಿತ್ಯವಿಧಿಗಳನ್ನು ತೀರಿಸಿರಬೇಕು. ಸ್ನಾನಮಾಡಿ ಇಲ್ಲವೇ ಮುಖ, ಹಸ್ತಪಾದ ಪ್ರಕ್ಷಾಲನೆಗಳನ್ನು ನಿರ್ವರ್ತಿಸಿರಬೇಕು. ಜಪಕ್ಕೆ ಯೋಗ್ಯಕಾಲ ಪ್ರಾತಃಕಾಲ ಮತ್ತು ಸಂಧ್ಯಾಕಾಲ. ಪ್ರಾರ್ಥನಾಶ್ಲೋಕಗಳ ನಂತರ ಜಪವನ್ನು ಆರಂಭಿಸಬೇಕು. ಕಾರಣ ಮನಸ್ಸು. ಪ್ರಪಂಚ ವ್ಯವಹಾರದಲ್ಲೇ ಸದಾ ಕಾಲವೂ ಇರುವುದರಿಂದ ಏಕಾಗ್ರತೆ ಸಿಗುವುದು ಕಷ್ಟಸಾಧ್ಯ. ಸ್ತೋತ್ರವು ಏಕಾಗ್ರತೆಗೆ ಸಹಾಯ ಮಾಡುತ್ತದೆ. ಹೀಗೆಯೇ ಜಪಾಂತ್ಯದಲ್ಲಿಯೂ ಸಹ ಪ್ರಾರ್ಥನಾ ಶ್ಲೋಕಗಳನ್ನು ಹೇಳಿ ಆಸನ ಬಿಟ್ಟು ಮೇಲೇಳಬೇಕು.

ವೇದೋಕ್ತಜಪ ಕೈಗೊಳ್ಳುವವರು ಜಪಕ್ಕೆ ಪೂರ್ವ ಆಚಮನ, ಪ್ರಾಣಾಯಾಮ, ಮಾರ್ಜನೆ, ಸಂಕಲ್ಪ, ಪುನರ್ಮಾರ್ಜನೆ, ಅರ್ಘ್ಯ ಪ್ರದಾನ, ಭೂಶುದ್ಧಿ, ಭೂತಶುದ್ಧಿ, ಆಸನ ಕಲ್ಪನೆ ಇವುಗಳನ್ನು ವಿಧಿವತ್ತಾಗಿ ಮಾಡಬೇಕು. ಉತ್ತರಾಂಗದಲ್ಲಿ ದಿಗ್ದೇವತಾವಂದನೆ, ಹಾಗೂ ಸಮರ್ಪಣೆ. ಆಕಸ್ಮಾತ್ತಾಗಿ ಮಧ್ಯೆ ಆಲಸಿಕೆ, ಸೀನು, ಆಕಳಿಕೆ, ನಿದ್ರೆ ಅನ್ಯಚಿಂತನೆಗಳು ಬಂದರೆ ಮೂರು ಬಾರಿ ಆಚಮನ ಮಾಡಿ,

ತದ್ವಿಷ್ಣೋಃ ಪರಮಂ ಪದಂ
ಸದಾ ಪಶ್ಯಂತಿ ಸೂರಯಃ
ದಿವೀವ ಚಕ್ಷುರಾತತಂ
ತದ್ವಿಪ್ರಾಸೋ ವಿಪನ್ಯವೋ
ಜಾಗೃವಾಂಸಃ ಸಮಿಂಧತೇ
ವಿಷ್ಣೋರ್ಯತ್ಪರಮಂ ಪದಂ

ಎಂದು ಶ್ರೀ ವಿಷ್ಣುಸ್ಮರಣೆ ಮಾಡಬೇಕು. ಜಪ ಮುಗಿದ ಮೇಲೆ 'ಹವನ'. 'ಹೋಮ', 'ದಾನ', 'ಬ್ರಾಹ್ಮಣ ಭೋಜನ', 'ಸುವಾಸಿನಿಯರಿಗೆ ವಸ್ತ್ರ' ಇವುಗಳನ್ನು ಶಕ್ತಿಯಿದ್ದವರು ಮಾಡುವುದೊಳ್ಳಿತು.

ಜಪದ ಸಂಖ್ಯೆಯೂ ಸಹ ಅವರವರ ಆಶ್ರಮಕ್ಕೆ ಅನುಸಾರವಾಗಿಯೇ ಇದೆ. ಬ್ರಹ್ಮಚಾರಿ ಹಾಗೂ ಗೃಹಸ್ಥರಿಗೆ ನೂರೆಂಟು, ವಾನಪ್ರಸ್ಥರಿಗೆ ಹಾಗೂ ಸನ್ಯಾಸಿಗಳಿಗೆ ಸಾವಿರದೆಂಟು ಎಂದು ಹೇಳಿದೆ.

"ಅಸಂಖ್ಯಾತಂತು ಯಜ್ಜಪ್ತಂ
ತತ್ಸರ್ವಂ ನಿಷ್ಫಲಂ ಭವೇತ್ ।

ಎಂದು ಹೇಳಿದೆ. ಅಂದರೆ ಲೆಕ್ಕವಿಲ್ಲದಂತೆ ಮಾಡಿದ ಜಪವು ವ್ಯರ್ಥವೇ ಎಂಬುದೊಂದು ವಾದವಿದೆ. ಮನಸ್ಸು ಏಕಾಗ್ರತೆಯಲ್ಲಿರುವಾಗ ಲೆಕ್ಕವನ್ನಿಡುವುದೆಂತು? ಅದಕ್ಕೆ ಅನೇಕ ಕ್ರಮಗಳನ್ನು ಹೇಳಿದ್ದಾರೆ. ಬೆರಳೆಣಿಕೆ, ಧಾನ್ಯಗಳ ಎಣಿಕೆ, ಜಪಮಾಲೆಯ ಮಣಿಗಳ ಎಣಿಕೆ ಮೊದಲಾದವು.

ಯಾವ ಜಪಕ್ಕೇ ಆಗಲಿ, ಅರಿಷಡ್ವರ್ಗಗಳಿಂದ ಮುಕ್ತನಾದ ಗುರುವಿನ ಉಪದೇಶವನ್ನು ಪಡೆಯಬೇಕು. ಗುರುವಿಲ್ಲದೆ ಪುಸ್ತಕದಲ್ಲಿರುವ ಮಂತ್ರವನ್ನು ಜಪಮಾಡಿದರೂ ನಿಷ್ಫಲವೇ. ಇದಕ್ಕೆ ಕಾರಣ ಗುರುವು ಕೇವಲ ಮಂತ್ರೋಪದೇಶ ಮಾತ್ರ ಮಾಡುವುದಿಲ್ಲ; ಅದರ ಜತೆಗೆ ತನ್ನ ಅಶೀರ್ವಾದ ಶ್ರೀರಕ್ಷೆಯನ್ನೂ ನೀಡುತ್ತಾನೆ. ಮಂತ್ರಕ್ಕಿಂತ ಆ ಗುರುವಿನ ಆಶೀರ್ವಚನವೇ ಶಿಷ್ಯನಿಗೆ ಮುಖ್ಯವೆಂಬುದನ್ನು ಮನಗಾಣಬೇಕು. ಆದ್ದರಿಂದಲೇ 'ಗುರು' ಎಂಬ ಪದದ ಅರ್ಥ ಹೀಗಿದೆ :

ಗುಕಾರಸ್ತ್ವಂಧಕಾರಸ್ತು
ರುಕಾರಸ್ತನ್ನಿರೋಧಕಃ ।
ಅಂಧಕಾರ ನಿರೋಧತ್ವಾತ್
ಗುರುರಿತ್ಯಭಿಧೀಯತೇ ॥

'ಗು' ಎಂದರೆ ಕತ್ತಲು ಅರ್ಥಾತ್ ಅಜ್ಞಾನ. 'ರು' ಎಂದರೆ ಅದನ್ನು ಪರಿಹರಿಸುವುದು. ಯಾವನು ನಮ್ಮಲ್ಲಿರುವ ಅಜ್ಞಾನವನ್ನು ದೂರ ಮಾಡಿ ಸುಜ್ಞಾನವನ್ನು ಬೋಧಿಸುವನೋ ಅವನೇ 'ಗುರು'. ಅಂತಹ ಸದ್ಗುರುವಿನ ಉಪದೇಶವನ್ನು ವಿಧಿವತ್ತಾಗಿ ಪಡೆದು 'ಜಪ' ಮಾಡಲು ಉಪಕ್ರಮಿಸಬೇಕು.

---

(ಹಿಂದಿನ ಪುಟದಿಂದ)

೧೦. ವಿಲೋಮ ಜಪ: ಆರೋಹಣ ಕ್ರಮದಲ್ಲಿ ಜಪಿಸುವ ಮಂತ್ರವನ್ನು ಅವರೋಹಣ ಕ್ರಮದಲ್ಲಿ ಜಪಿಸುವುದೇ ವಿಲೋಮ ಜಪ. ಈ ರೀತಿಯ ಜಪವು ಅಭಿಚಾರಾದಿ ಕ್ಷುದ್ರಕರ್ಮ ನಿವಾರಣೆಗೆ ಉಪಯುಕ್ತವಾಗುತ್ತದೆ.

೧೧. ನಿಷಿದ್ಧ ಜಪ: ಉಪದೇಶವಾಗದ ಮಂತ್ರವನ್ನು ಅನಿಯಮಿತವಾಗಿಯೂ, ಅಪವಿತ್ರತೆಯಿಂದಲೂ, ಸಂಯಮರಹಿತವಾಗಿಯೂ ಜಪಿಸುವುದೇ 'ನಿಷಿದ್ಧ ಜಪವು'. ಇದರಿಂದ ಹಾನಿಯೇ ಹೊರತು ಶ್ರೇಯಸ್ಸಾಗಲಾರದು.

೧೨. ಲಿಖಿತ ಜಪ: ಗುರೂಪದಿಷ್ಟವಾದ ಮಂತ್ರವನ್ನು ವಿಶಿಷ್ಟವಾದ ಯೋಗಾಸನದಲ್ಲಿ ಬಹಳಕಾಲ ಕುಳಿತು ಅಂತರ್ಮುಖಿಗಳಾಗಿ ಜಪ ಮಾಡುವುದಕ್ಕೆ ಅವಕಾಶವೂ, ಬಲವೂ ಇಲ್ಲದ, ಬಹಿರ್ಮುಖವಾದ ಚಿತ್ತವೃತ್ತಿಯುಳ್ಳ ಜನರಿಗಾಗಿ ರೂಪಿತವಾಗಿರುವುದೇ 'ಲಿಖಿತಜಪ'ವು ವಿರಾಮವಿರುವಾಗಲೆಲ್ಲಾ ಪುಸ್ತಕಗಳಲ್ಲಿ ದೇವರ ನಾಮಗಳನ್ನು ಒಮ್ಮನಸ್ಸಿನಿಂದ ಬರೆಯುವುದು. ಅದಕೆ ಹಾಗೆ ಬರೆಯುವಾಗ ಶುಚಿರ್ಭೂತರಾಗಿ ಒಂದೆಡೆ ಕುಳಿತು, ಪವಿತ್ರಭಾವನೆಯಿಂದ ಪರಮಾತ್ಮನನ್ನು ಚಿಂತನೆಗೈಯುತ್ತಾ, ಮೌನವಾಗಿ ನಾಮವನ್ನು ಬರೆಯಬೇಕು. ಈ ರೀತಿ ಸುಲಭವಾಗಿ ಕೋಟಿ ಕೋಟಿ ನಾಮಗಳನ್ನು ಬರೆಯಬಹುದು. ಸಾಮಾನ್ಯವಾಗಿ 'ರಾಮನಾಮ'ವನ್ನು ಲಿಖಿತಜಪಕ್ಕೆ ಅಳವಡಿಸಿಕೊಳ್ಳುವುದು ಮೊದಲಿನಿಂದಲೂ ರೂಢಿಯಲ್ಲಿದೆ. 'ರಾಮನಾಮಹೋಮ'ವನ್ನು ಮಾಡುವಾಗ ಇದನ್ನೂ ಸಲ್ಲಿಸುತ್ತಾರೆ.

ಈ ಉಪದೇಶವು ಏಕಾಕ್ಷರೀ, ದ್ವ್ಯಕ್ಷರೀ, ತ್ರ್ಯಕ್ಷರೀ, ಪಂಚಾಕ್ಷರೀ, ಷಡಕ್ಷರೀ, ಅಷ್ಟಾಕ್ಷರೀ, ದಶಾಕ್ಷರೀ, ದ್ವಾದಶಾಕ್ಷರೀ, ಪಂಚದಶಾಕ್ಷರೀ, ಷೋಡಷಾಕ್ಷರೀ, ಚತುರ್ವಿಂಶತ್ಯಕ್ಷರೀ–ಇವುಗಳಲ್ಲಿ ಯಾವುದಾದರೂ ಆಗಿರಬಹುದು

೧. ಏಕಾಕ್ಷರೀ ಮಂತ್ರ: ಒಂದೇ ಒಂದು ಅಕ್ಷರಸಂಖ್ಯೆಯನ್ನುಳ್ಳ ಮಂತ್ರವನ್ನು 'ಏಕಾಕ್ಷರೀ' ಎಂದು ಕರೆಯುತ್ತಾರೆ. ಅದೇ 'ಓಂ' ಕಾರ. ಓಂಕಾರವು ಅತಿಶ್ರೇಷ್ಠವಾದ ಮಂತ್ರ. ಇದಕ್ಕೆ ಕಾರಣ ಇದು ನಿರ್ಗುಣೋಪಾಸನೆಯ ಮಂತ್ರವಾಗಿರುವುದೇ ಆಗಿದೆ. 'ಓಂಕಾರೋಪಾಸನೆ' ಗೆ 'ನಾದೋಪಾಸನೆ' ಎಂಬ ಇನ್ನೊಂದು ಹೆಸರೂ ಉಂಟು. ನಾದ ಎಂದರೆ ಸ್ವರ, ಧ್ವನಿ, ಶಬ್ದ ಎಂದು. ಈ ಧ್ವನಿ ತರಂಗಗಳ ಏರಿಳಿತದ–ಅಲೆಗಳ ಸ್ಪಂದನದ ಪರಿಣಾಮವಾಗಿಯೇ ಉತ್ಪತ್ತಿಯೂ ಆಗಿದೆ. ಅಂದರೆ ಬ್ರಹ್ಮಾಂಡ ಪಿಂಡಾಂಡಗಳ ರಹಸ್ಯವೆಲ್ಲ ನಾದದಲ್ಲಿಯೇ ಅರ್ಥಾತ್ ಓಂಕಾರದಲ್ಲಿಯೇ ಅಡಗಿದೆ. ಅದ್ದರಿಂದಲೇ ಓಂಕಾರವನ್ನು ಪರಬ್ರಹ್ಮನ ಸಂಕೇತ, ಸಚ್ಚಿದಾನಂದ ಸ್ವರೂಪಿಯಾದ ಆತ್ಮನ ಸ್ವರೂಪ ಎನ್ನಲಾಗಿದೆ. ಅವ್ಯಕ್ತ ವ್ಯಕ್ತ ಮತ್ತು ವ್ಯಾಪಕಾವಸ್ಥೆಯಲ್ಲಿ ಕೂಡ ವೇದದ ಮೂಲ ತಿರುಳಾದ ಓಂಕಾರವೇ ಮೊದಲು ಕುಂಡಲಿನೀ ಶಕ್ತಿಯಿಂದ ಪ್ರಕಾಶಿತವಾಯಿತು. ಉಳಿದೆಲ್ಲ ದೇವ ದೇವತೆಗಳ ಮಂತ್ರದ ರಚನೆಯೂ ಅನಂತರವೇ ಆದುದರಿಂದಲೇ ಮುಮುಕ್ಷುವಿಗೆ ಕುಂಡಲಿನೀ ಶಕ್ತಿಯ ಜಾಗ್ರತೆಯಾದರೂ ಈ ಓಂಕಾರದ ಉಪಾಸನೆಯಿಂದಲೇ ಆಗಬೇಕಾಗಿದೆ. ಕಾರಣ ಓಂಕಾರವೇ ಈ ಎಲ್ಲ ಸೃಷ್ಟಿಯ ಮೂಲ. ಸರ್ವೋತ್ತಮವಾದ ಬ್ರಹ್ಮವೂ ಇದೇ. ಇದನ್ನೇ ತೈತ್ತರೀಯ ಉಪನಿಷತ್ತಿನಲ್ಲಿ "ಓಂ ಇತಿ ಬ್ರಹ್ಮ"– ಓಂಕಾರವೇ ಬ್ರಹ್ಮ ಎಂದು ಹೇಳಿದೆ.

"ಓಂ ಇತಿ ಇದಂ ಸರ್ವಂ"

ಅಂದರೆ ಓಂಕಾರವೇ ಈ ಸರ್ವಸೃಷ್ಟಿಗೆ ಮೂಲ. ಇದನ್ನೇ ಭಗವದ್ಗೀತೆಯಲ್ಲಿ,

"ಪ್ರಣವಸ್ಸರ್ವವೇದೇಷು"

ಎಂದು ಹೇಳಿದೆ. ಅಂದರೆ ಓಂಕಾರವೇ ಎಲ್ಲಾ ವೇದಗಳ ಸಾರ. ಓಂಕಾರಕ್ಕೆ ಪ್ರಣವಾಕ್ಷರ ಎಂಬ ಹೆಸರೂ ಇದೆ. ಅದುದರಿಂದ ಓಂಕಾರವನ್ನು ಜಪ ಮಾಡುವುದರಿಂದ ಚತುರ್ವೇದವನ್ನೂ ಜಪಮಾಡಿದಂತಾಗುತ್ತದೆ.

ಓಂಕಾರವು ಶಾಂತಿ ಮಂತ್ರ. ಆದುದರಿಂದಲೇ ಪ್ರತಿಯೊಂದು ಮಂತ್ರದ ಪ್ರಾರಂಭವೂ ಓಂಕಾರದಿಂದಲೇ ಪ್ರಾರಂಭವಾಗುತ್ತದೆ. ಉದಾಹರಣಾರ್ಥವಾಗಿ,

ಓಂ ಶನ್ನೋ ಮಿತ್ರಃ ಶಂ ವರುಣಃ...
ಓಂ ಸಹನಾವವತು, ಸಹನೌಭುನಕ್ತು ...
ಓಂ ಭದ್ರಂಕರ್ಣೇಭಿಃ ಶೃಣುಯಾಮದೇವಾಃ
ಓಂ ತಚ್ಛಂಯೋರಾ ವೃಣೀಮಹೇ...

– ಇತ್ಯಾದಿ. ಇವೇ ಅಲ್ಲದೆ ದೇವ-ದೇವಿಯರ ಅಷ್ಟೋತ್ತರ, ತ್ರಿಶತಿ, ಸಹಸ್ರನಾಮಗಳೂ ಸಹ ಓಂಕಾರದಿಂದಲೇ ಪ್ರಾರಂಭವಾಗುತ್ತದೆ. ಉದಾಹರಣೆಗೆ,

ಓಂ ಶಿವಾಯನಮಃ
— ಶ್ರೀ ಶಿವಾಷ್ಟೋತ್ತರಶತನಾಮಾವಳಿ
ಓಂ ಶ್ರೀಮಾತ್ರೇನಮಃ
— ಶ್ರೀ ಲಲಿತಾಸಹಸ್ರನಾಮ

ಓಂಕಾರವು ಅ,ಉ,ಮ ಎಂಬ ಮೂರು ಅಕ್ಷರಗಳಿಂದ ಕೂಡಿದೆ ಓಂಕಾರವು ಕೇವಲ ಹಿಂದೂ ಧರ್ಮದಲ್ಲೇ ಅಲ್ಲ. ಇತರ ಧರ್ಮದವರಲ್ಲೂ ಈ ಪವಿತ್ರ ಮಂತ್ರವಿದೆ. ಪರ್ಷಿಯನ್ ಭಾಷೆಯಲ್ಲಿ 'ಓಂ' ಎಂದರೆ 'ಓ ನಾನಿದ್ದೇನೆ' ಎಂದರ್ಥ. ಇದನ್ನೇ ಕ್ರಿಶ್ಚಿಯನ್ನರು 'ಎಮೆನ್'' ಎಂದೂ ಮಹಮ್ಮದೀಯರು 'ಅಮೀನ್'' ಎಂದೂ ಗ್ರೀಕರು 'ಅಮೀಗಾ' ಎಂದೂ ಕರೆಯುತ್ತಾರೆ. ಹೀಗೆ ವಿಶ್ವದ ಎಲ್ಲ ಮತಧರ್ಮಗಳಲ್ಲೂ ಚಿಕ್ಕಪುಟ್ಟ ಬದಲಾವಣೆಗಳೊಡನೆ ಓಂಕಾರವು ಅಸ್ತಿತ್ವದಲ್ಲಿದೆ.

ಯೋಗಿಯಾದವನು ಈ ಓಂಕಾರವನ್ನು ನಿತ್ಯವೂ ಜಪಿಸುವುದರಿಂದ ಅವನ ಪರಮಗಂತವ್ಯವಾದ ಮೋಕ್ಷವು ಪ್ರಾಪ್ತಿಯಾಗುತ್ತದೆ. ಅದನ್ನೇ,

ಓಂಕಾರಬಿಂದು ಸಂಯುಕ್ತಂ
ನಿತ್ಯಂ ಧ್ಯಾಯಂತಿ ಯೋಗಿನಃ ।
ಕಾಮದಂ ಮೋಕ್ಷದಂ ಚೈವ
ಓಂಕಾರಾಯ ನಮೋನಮಃ ॥

ಎಂದು ಹೇಳಿದೆ. ಅಲ್ಲದೆ ಪ್ರಣವವೇ ತಾನೆಂದು ಪರಮಾತ್ಮನೇ ಹೇಳಿದ್ದಾನೆ.

"ಅಹಮೇಕೋ ಅಖಿಲ ಗುಣೋವಾಚಕಃ"

ಓಂಕಾರದಷ್ಟು ಚಿಕ್ಕ ಮಂತ್ರ ಬೇರೆ ಯಾವುದೂ ಇಲ್ಲ. ಮಂತ್ರವು ಚಿಕ್ಕದಿದ್ದಷ್ಟೂ, ಪುನಶ್ಚರಣೆಗೆ ಸುಲಭವಾದ್ದರಿಂದ ಓಂಕಾರವು ಜಪಿಸಲು ಸರ್ವಶ್ರೇಷ್ಠವಾದ ಮಂತ್ರ.

೨. ದ್ವ್ಯಕ್ಷರೀ: ಎರಡು ಅಕ್ಷರಗಳಿಂದ ಕೂಡಿದ ಮಂತ್ರವೇ ಅಥವಾ ನಾಮವೇ ದ್ವ್ಯಕ್ಷರೀ.

ಅಂತಹ ಪವಿತ್ರನಾಮಗಳಲ್ಲಿ 'ರಾಮನಾಮವು' ಅತಿ ಶ್ರೇಷ್ಠವಾದುದು. ರಾಮನಾಮವನ್ನು 'ತಾರಕನಾಮ'ವೆಂತಲೂ ಕರೆಯುತ್ತಾರೆ ರಾಮನಾಮಸ್ಮರಣಮಾತ್ರದಿಂದ ನಮ್ಮನ್ನು ಭವಸಮು

(33ನೇ ಪುಟ ನೋಡಿ)

# ಶ್ರೀಮದ್ಭಗವದ್ಗೀತೆ

## ೬ ನೆಯ ಅಧ್ಯಾಯ

## ಧ್ಯಾನದ ಬಗೆ

ಶ್ರೀ ಭಗವಾನುವಾಚ–

ಅನಾಶ್ರಿತಃ ಕರ್ಮಫಲಂ
ಕಾರ್ಯಂ ಕರ್ಮ ಕರೋತಿ ಯಃ ।
ಸ ಸನ್ಯಾಸೀ ಚ ಯೋಗೀ ಚ
ನ ನಿರಗ್ನಿರ್ನ ಚಾಕ್ರಿಯಃ ॥ 1

ಶ್ರೀಕೃಷ್ಣ : ಕರ್ಮದ ಫಲಕ್ಕಾಗಿ ಹಂಬಲಿಸದೆ, ಕರ್ತವ್ಯವೆಂದು ಕರ್ಮವನ್ನು ಮಾಡುವವನೇ ನಿಜವಾದ ಸನ್ಯಾಸಿ ಮತ್ತು ಕರ್ಮಯೋಗಿ. ಹೊರತು ಸುಮ್ಮನೆ ಅಗ್ನಿಹೋತ್ರ ಮೊದಲಾದ ಕರ್ಮವನ್ನು ಬಿಟ್ಟವನೂ ಯಾವ ಸತ್ಕರ್ಮಗಳನ್ನೂ ಮಾಡದವನೂ, ಅಲ್ಲ.

ಯಂ ಸನ್ಯಾಸಮಿತಿ ಪ್ರಾಹುಃ
ಯೋಗಂ ತಂ ವಿದ್ಧಿ ಪಾಂಡವ ।
ನ ಹ್ಯಸನ್ಯಸ್ತಸಂಕಲ್ಪೋ
ಯೋಗೀ ಭವತಿ ಕಶ್ಚನ ॥ 2

ಅರ್ಜುನ, ಯಾವ ಸ್ಥಿತಿಯನ್ನು ಕರ್ಮಸನ್ಯಾಸವೆನ್ನುವರೋ ಅದನ್ನೇ ಕರ್ಮಯೋಗವೆಂದೂ ತಿಳಿ. ಏಕೆಂದರೆ ಫಲದ ಬಯಕೆಯ ಸನ್ಯಾಸವಿಲ್ಲದೆ ಕರ್ಮ ಮಾಡುವವನು ಕರ್ಮ ಯೋಗಿಯೂ ಆಗಲಾರ.

ಆರುರುಕ್ಷೋರ್ಮುನೇರ್ಯೋಗಂ
ಕರ್ಮ ಕಾರಣಮುಚ್ಯತೇ ।
ಯೋಗಾರೂಢಸ್ಯ ತಸ್ಯೈವ
ಶಮಃ ಕಾರಣಮುಚ್ಯತೇ ॥ 3

ಸಾಧನೆಯ ದಾರಿಯಲ್ಲಿ ಮೇಲೇರಬಯಸುವ ಸಾಧಕನಿಗೆ ಲೋಕಸೇವಾರೂಪವಾದ ಕರ್ಮವೂ ಉನ್ನತಿಯ ಸಾಧನ, ಸಿದ್ಧಿ ಪಡೆದು ಭಗವಂತನಲ್ಲಿ ನೆಲೆಗೊಂಡ ಜ್ಞಾನಿಗೆ ಲೌಕಿಕ ಕರ್ಮದ ನಿಯತಿಯಿಲ್ಲ.

ಯದಾ ಹಿ ನೇಂದ್ರಿಯಾರ್ಥೇಷು
ನ ಕರ್ಮಸ್ವನುಷಜ್ಜತೇ ।
ಸರ್ವಸಂಕಲ್ಪಸನ್ಯಾಸೀ
ಯೋಗಾರೂಢಸ್ತದೋಚ್ಯತೇ ॥ 4

ವಿಷಯಗಳಲ್ಲಿ ಕರ್ಮಗಳಲ್ಲಿ ಮಮತೆ ತೊರೆದು ಎಲ್ಲ ಕಾಮನೆಗಳನ್ನೂ ಮೀರಿ ನಿಂತವನು ಸಾಧನೆಯ ಮೆಟ್ಟಲೇರಿ ಸಿದ್ಧಿ ಪಡೆದಂಥವನು.

ಉದ್ಧರೇದಾತ್ಮನಾತ್ಮಾನಂ
ನಾತ್ಮಾನಮವಸಾದಯೇತ್ ।
ಆತ್ಮೈವ ಹ್ಯಾತ್ಮನೋ ಬಂಧುಃ
ಆತ್ಮೈವ ರಿಪುರಾತ್ಮನಃ ॥ 5

ತನ್ನನ್ನು ತನ್ನ ಮನೋಬಲದಿಂದಲೇ ಮೇಲಕ್ಕೆತ್ತಬೇಕು. ಪತನದ ದಾರಿಗೆ ತನ್ನನ್ನು ತಳ್ಳಬಾರದು. ಏಕೆಂದರೆ ನಮ್ಮ ಮನಸ್ಸೇ ನಮಗೆ ನಂಟು, ನಮ್ಮ ಮನಸ್ಸೇ ನಮಗೆ ಹಗೆ.

ಬಂಧುರಾತ್ಮಾತ್ಮನಸ್ತಸ್ಯ
ಯೇನಾತ್ಮೈವಾತ್ಮನಾ ಜಿತಃ ।
ಅನಾತ್ಮನಸ್ತು ಶತ್ರುತ್ವೇ
ವರ್ತೇತಾತ್ಮೈವ ಶತ್ರುವತ್ ॥ 6

ಮನೋಬಲದಿಂದ ತನ್ನನ್ನು ತಾನೆ ಗೆದ್ದವನಿಗೆ ಅವನ ಮನಸ್ಸು ನಂಟ. ಯಾರು ಮನಸನ್ನು ಗೆಲ್ಲಲಾರನೋ ಅವನನ್ನು ಮನಸ್ಸೇ ಹಗೆಯಂತೆ ಕಾಡುತ್ತದೆ.

ಜಿತಾತ್ಮನಃ ಪ್ರಶಾಂತಸ್ಯ
ಪರಮಾತ್ಮಾ ಸಮಾಹಿತಃ ।
ಶೀತೋಷ್ಣ ಸುಖದುಃಖೇಷು
ತಥಾ ಮಾನಾಪಮಾನಯೋಃ ॥ 7



ಜ್ಞಾನವಿಜ್ಞಾನತೃಪ್ತಾತ್ಮಾ
ಕೂಟಸ್ಥೋ ವಿಜಿತೇಂದ್ರಿಯಃ ।
ಯುಕ್ತ ಇತ್ಯುಚ್ಯತೇ ಯೋಗೀ
ಸಮಲೋಷ್ಟಾಶ್ಮಕಾಂಚನಃ ॥ 8

ಮನಸ್ಸನ್ನು ಗೆದ್ದು ಇಂದ್ರಿಯಗಳ ಮೋಹ ಕಳೆದಾಗ ಭಗವಂತನು ಹೃದಯದಲ್ಲಿ ನೆಲೆ ಗೊಳ್ಳುತ್ತಾನೆ. ಶೀತ–ಉಷ್ಣ; ಸುಖ–ದುಃಖ; ಮಾನ–ಅಪಮಾನ ಇಂಥ ದ್ವಂದ್ವಗಳಲ್ಲಿ ಆಗ ತಟಸ್ಥ ಭಾವ ಬರುತ್ತದೆ. ಶಾಸ್ತ್ರದ ತಿಳಿವಿನಿಂದಲೂ ಅನುಭವದಿಂದಲೂ ತೃಪ್ತಿ ಮೂಡುತ್ತದೆ. ಮಣ್ಣು ಹೆಂಟೆಯನ್ನೂ ಬಂಗಾರವನ್ನೂ ಸರಿಜೋಡಿಯಾಗಿ ಉಪೇಕ್ಷೆಯಿಂದ ಕಾಣುವ ಜಿತೇಂದ್ರಿಯನಾದ ಇಂಥ ಯೋಗಿಯೇ ಯೋಗಸಿದ್ಧನೆನ್ನಿಸುತ್ತಾನೆ.

ಸುಹೃನ್ಮಿತ್ರಾರ್ಯುದಾಸೀನ
ಮಧ್ಯಸ್ಥದ್ವೇಷ್ಯಬಂಧುಷು ।
ಸಾಧುಷ್ವಪಿ ಚ ಪಾಪೇಷು
ಸಮಬುದ್ಧಿರ್ವಿಶಿಷ್ಯತೇ ॥ 9

ಅಕಾರಣ ಬಂಧುಗಳು, ಆಪತ್ತಿಗೆ ಒದಗುವ ಗೆಳೆಯರು, ಹಗೆಗಳು, ಯಾವ ಪಕ್ಷವನ್ನೂ ಹಿಡಿಯದವರು, ಎರಡು ಪಕ್ಷಗಳ ಹಿತವನ್ನೂ ಬಯಸುವವರು, ಅಪ್ರಿಯವಾದದ್ದನ್ನೆ ಮಾಡುವವರು, ನೆಂಟರು, ಸಜ್ಜನರು, ದುರ್ಜನರು–ಇವರೆಲ್ಲರನ್ನೂ ನಿರ್ವಿಕಾರ ಬುದ್ಧಿಯಿಂದ ಕಾಣುವವನು ಹೆಚ್ಚಿನವನು.

ಯೋಗೀ ಯುಂಜೀತ ಸತತಂ
ಆತ್ಮಾನಂ ರಹಸಿ ಸ್ಥಿತಃ ।
ಏಕಾಕೀ ಯತಚಿತ್ತಾತ್ಮಾ
ನಿರಾಶೀರಪರಿಗ್ರಹಃ ॥ 10

ಯೋಗಿಯಾದವನು ಏಕಾಂತದಲ್ಲಿ ಒಂಟಿಯಾಗಿದ್ದು, ದೇಹವನ್ನೂ ಮನಸ್ಸನ್ನೂ ನಿಯಂತ್ರಿಸಿಕೊಂಡು, ಏನನ್ನೂ ಬಯಸದೆ, ಪರರ ಸೊತ್ತಿಗೆ ಕೈಯೊಡ್ಡದೆ ಯಾವಾಗಲೂ ಬಗೆಯನ್ನು ಭಗವಂತನಲ್ಲಿಯೇ ನೆಲೆಗೊಳಿಸಬೇಕು.

ಶುಚೌ ದೇಶೇ ಪ್ರತಿಷ್ಠಾಪ್ಯ
ಸ್ಥಿರಮಾಸನಮಾತ್ಮನಃ ।
ನಾತ್ಯುಚ್ಛ್ರಿತಂ ನಾತಿನೀಚಂ
ಚೈಲಾಜಿನಕುಶೋತ್ತರಮ್ ॥ 11

ತತ್ರೈಕಾಗ್ರಂ ಮನಃ ಕೃತ್ವಾ
ಯತಚಿತ್ತೇಂದ್ರಿಯಕ್ರಿಯಃ ।
ಉಪವಿಶ್ಯಾಸನೇ ಯುಂಜ್ಯಾತ್
ಯೋಗಮಾತ್ಮವಿಶುದ್ಧಯೇ ॥ 12

ಶುದ್ಧವಾದ ಕಡೆ ಹೆಚ್ಚು ಎತ್ತರವೂ ಹೆಚ್ಚು ತಗ್ಗೂ ಆಗದಂತೆ ದರ್ಭೆ, ಹುಲಿಯ ಅಥವಾ ಜಿಂಕೆಯ ಚರ್ಮ, ಬಟ್ಟೆ–ಇವುಗಳನ್ನು ಕ್ರಮವಾಗಿ ಒಂದರ ಮೇಲೊಂದಾಗಿ ಹಾಸಿ, ತನಗೆ ಭದ್ರವಾದ ಆಸನವನ್ನು ಸಿದ್ಧಪಡಿಸಿಕೊಂಡು, ಆ ಪೀಠದ ಮೇಲೆ ಕುಳಿತು ಮನಸ್ಸಿನ ಮತ್ತು ಇಂದ್ರಿಯಗಳ ಚಲನವನ್ನು ತಡೆದು ಮನಸ್ಸನ್ನು ಒಮ್ಮುಖವಾಗಿ ಮಾಡಿ ಮನಸ್ಸಿನ ಶುದ್ಧಿಗಾಗಿ ಮನೋನಿಗ್ರಹವನ್ನು ಅಭ್ಯಾಸ ಮಾಡಬೇಕು.

ಸಮಂ ಕಾಯಶಿರೋಗ್ರೀವಂ
ಧಾರಯನ್ನಚಲಂ ಸ್ಥಿರಃ ।
ಸಂಪ್ರೇಕ್ಷ್ಯ ನಾಸಿಕಾಗ್ರಂ ಸ್ವಂ
ದಿಶಶ್ಚಾನವಲೋಕಯನ್ ॥ 13

ಪ್ರಶಾಂತಾತ್ಮಾ ವಿಗತಭೀಃ
ಬ್ರಹ್ಮಚಾರಿವ್ರತೇ ಸ್ಥಿತಃ ।
ಮನಃಸಂಯಮ್ಯ ಮಚ್ಚಿತ್ತೋ
ಯುಕ್ತ ಆಸೀತ ಮತ್ಪರಃ ॥ 14

ಮೈ, ತಲೆ, ಕೊರಳು–ಇವುಗಳು ಅಲ್ಲಾಡದಂತೆ ಸ್ಥಿರವಾಗಿ ನೆಟ್ಟಗೆ ಕುಳಿತು ಅತ್ತಿತ್ತ ದಿಕ್ಕುಗಳ ಕಡೆ ನೋಡದೆ ದೃಷ್ಟಿಯನ್ನು ಮೂಗಿನ ತುದಿಯಲ್ಲಿ ಕೇಂದ್ರೀಕರಿಸಿ, ತಿಳಿಮನಸ್ಸಿನಿಂದ ನಿರ್ಭಯನಾಗಿ ಗುರುಸೇವೆ ಮೊದಲಾದ ವ್ರತಗಳನ್ನು ನಡೆಸುತ್ತ ಮನಸ್ಸನ್ನು ಬಿಗಿಹಿಡಿದು ನನ್ನಲ್ಲಿಟ್ಟು, ನನ್ನನ್ನೇ ಧ್ಯಾನಮಾಡುತ್ತಾ ಇರಬೇಕು.

ಯುಂಜನ್ನೇವಂ ಸದಾತ್ಮಾನಂ
ಯೋಗೀ ನಿಯತಮಾನಸಃ ।
ಶಾಂತಿಂ ನಿರ್ವಾಣಪರಮಾಂ
ಮತ್ಸಂಸ್ಥಾಮಧಿಗಚ್ಛತಿ ॥ 15

ಹೀಗೆ ಯಾವಾಗಲೂ ಮನಸ್ಸನ್ನು ಬಿಡಿಹಿಡಿದು ತನ್ನನ್ನು ಧ್ಯಾನದಲ್ಲಿ ತೊಡಗಿಸಿದ ಯೋಗಿಯು ಈ ದೇಹ ತೊರೆದ ಮೇಲೆ ನನ್ನಲ್ಲಿ ನಲೆಯಾಗಿ ಸುಖವನ್ನು ಪಡೆಯುತ್ತಾನೆ.

ನಾತ್ಯಶ್ನತಸ್ತು ಯೋಗೋಽಸ್ತಿ
ನ ಚೈಕಾಂತಮನಶ್ನತಃ ।
ನ ಚಾತಿ ಸ್ವಪ್ನಶೀಲಸ್ಯ
ಜಾಗ್ರತೋ ನೈವ ಚಾರ್ಜುನ ॥ 16

ಅರ್ಜುನ, ಅಳತೆಗೆಟ್ಟು ತಿನ್ನುವವನಿಗೆ ಯೋಗದ ಮಾರ್ಗ ಮೈಗೂಡುವುದಿಲ್ಲ; ಎಷ್ಟು ಮಾತ್ರವೂ ಉಣ್ಣದೆ ಇರುವವನಿಗೂ ಇಲ್ಲ; ತುಂಬ ನಿದ್ದೆ ಮಾಡುವವನಿಗೂ ಇಲ್ಲ; ನಿದ್ದೆಗೇಡಿಗೂ ಇಲ್ಲ.

ಯುಕ್ತಾಹಾರವಿಹಾರಸ್ಯ
ಯುಕ್ತಚೇಷ್ಟಸ್ಯ ಕರ್ಮಸು ।
ಯುಕ್ತಸ್ವಪ್ನಾವಬೋಧಸ್ಯ
ಯೋಗೋ ಭವತಿ ದುಃಖಹಾ ॥ 17

ಮಿತವಾದ ಊಟ, ಮಿತವಾದ ಓಡಾಟ, ಮಿತ

ವಾದ ಕೆಲಸ, ಮಿತವಾದ ನಿದ್ರೆ, ಮಿತವಾದ ಎಚ್ಚರ ಇರುವವರಿಗೆ ಧ್ಯಾನವು ಅಡಚಣೆಗಳನ್ನೆಲ್ಲ ದಾಟಬಲ್ಲದ್ದಾಗುತ್ತದೆ.

ಯದಾ ವಿನಿಯತಂ ಚಿತ್ತಂ
ಆತ್ಮನ್ಯೇವಾವತಿಷ್ಠತೇ ।
ನಿಃಸ್ಪೃಹಃ ಸರ್ವಕಾಮೇಭ್ಯೋ
ಯುಕ್ತ ಇತ್ಯುಚ್ಯತೇ ತದಾ ॥ 18

ಯಾವಾಗ ಒಮ್ಮುಖವಾದ ಮನಸ್ಸು ಭಗವಂತನಲ್ಲಿಯೇ ಇರುವುದೋ ಆಗ ಅವನು ಯಾವ ಬಯಕೆಯೂ ಇಲ್ಲದವನಾಗಿ ಧ್ಯಾನನಿಷ್ಠನೆನಿಸುವನು.

ಯಥಾ ದೀಪೋ ನಿವಾತಸ್ಥೋ
ನೇಂಗತೇ ಸೋಪಮಾ ಸ್ಮೃತಾ ।
ಯೋಗಿನೋ ಯತಚಿತ್ತಸ್ಯ
ಯುಂಜತೋ ಯೋಗಮಾತ್ಮನಃ ॥ 19

ಗಾಳಿ ಬೀಸದಿರುವ ಕಡೆಯ ದೀಪವೂ ಅಲ್ಲಾಡದೆ ಇರುವ ಸ್ಥಿತಿಯು ಧ್ಯಾನವನ್ನು ಅಭ್ಯಾಸ ಮಾಡುವ ಮನೋನಿಗ್ರಹವುಳ್ಳ ಸಾಧಕನಿಗೆ ಹೋಲಿಕೆಯೆಂದು ದೊಡ್ಡವರು ಹೇಳಿರುವರು.

ಯತ್ರೋಪರಮತೇ ಚಿತ್ತಂ
ನಿರುದ್ಧಂ ಯೋಗಸೇವಯಾ ।
ಯತ್ರ ಚೈವಾತ್ಮನಾತ್ಮಾನಂ
ಪಶ್ಯನ್ನಾತ್ಮನಿ ತುಷ್ಯತಿ ॥ 20

ಸುಖಮಾತ್ಯಂತಿಕಂ ಯತ್ತತ್
ಬುದ್ಧಿಗ್ರಾಹ್ಯಮತೀಂದ್ರಿಯಮ್ ।
ವೇತ್ತಿ ಯತ್ರ ನ ಚೈವಾಯಂ
ಸ್ಥಿತಶ್ಚಲತಿ ತತ್ತ್ವತಃ ॥ 21

ಯಂ ಲಬ್ಧ್ವಾ ಚಾಪರಂ ಲಾಭಂ
ಮನ್ಯತೇ ನಾಧಿಕಂ ತತಃ ।
ಯಸ್ಮಿನ್ ಸ್ಥಿತೋ ನ ದುಃಖೇನ
ಗುರುಣಾಪಿ ವಿಚಾಲ್ಯತೇ ॥ 22

ತಂ ವಿದ್ಯಾದ್ದುಃಖಸಂಯೋಗ
ವಿಯೋಗಂ ಯೋಗಸಂಜ್ಞಿತಮ್ ।
ಸ ನಿಶ್ಚಯೇನ ಯೋಕ್ತವ್ಯೋ
ಯೋಗೋಽನಿರ್ವಿಣ್ಣಚೇತಸಾ ॥ 23

ಧ್ಯಾನದ ಅಭ್ಯಾಸದಿಂದ ಮನಸ್ಸು ಯಾವ ಸ್ಥಿತಿಯಲ್ಲಿ ಶಾಂತವಾಗುವುದೋ ಯಾವ ಸ್ಥಿತಿಯಲ್ಲಿಯೇ ಭಗವತ್‌ಸ್ವರೂಪವನ್ನು ಮನಸ್ಸಿನಿಂದ ಕಂಡು ತನ್ನಲ್ಲಿಯೇ ಸಂತೋಷವನ್ನು ಹೊಂದಬಲ್ಲುದೋ, ಇಂದ್ರಿಯಗಳಿಗೆ ನಿಲುಕದೆ ಬುದ್ಧಿಗೆ ಮಾತ್ರ ನಿಲುಕುವಂಥ ಪರಮ ಸುಖವನ್ನು ಅನುಭವಿಸುತ್ತದೋ, ಯಾವ ಸ್ಥಿತಿಯಲ್ಲಿ ನೆಲೆಗೊಂಡ ಯೋಗಿಯು ಅದರಿಂದ ವಿಚಲಿತನಾಗಲಾರನೋ, ಯಾವ ಸ್ಥಿತಿಯನ್ನು ಪಡೆದ ಮೇಲೆ ಬೇರೆ ಲಾಭವನ್ನು ಅದಕ್ಕಿಂತ ಹೆಚ್ಚಿನದೆಂದು ತಿಳಿಯುವುದಿಲ್ಲವೋ, ಯಾವ ಸ್ಥಿತಿಯಲ್ಲಿರುವವನು ಎಂಥ ದೊಡ್ಡ ವಿಪತ್ತಿನಿಂದಲೂ ಕಂಗೆಡುವುದಿಲ್ಲವೋ, ದುಃಖದ ಸಂಯೋಗವನ್ನು ದೂರ ಮಾಡುವ ಆ ಸ್ಥಿತಿಗೆ ಯೋಗವೆಂಬ ಹೆಸರೆಂದು ತಿಳಿ. ಆ ಯೋಗವನ್ನು ನಿರಾಶನಾಗದೆ ಭರವಸೆ ತಾಳಿ ಅಭ್ಯಾಸ ಮಾಡುತಕ್ಕದ್ದು.

ಸಂಕಲ್ಪಪ್ರಭವಾನ್ಕಾಮಾನ್
ತ್ಯಕ್ತ್ವಾ ಸರ್ವಾನಶೇಷತಃ ।
ಮನಸೈವೇಂದ್ರಿಯಗ್ರಾಮಂ
ವಿನಿಯಮ್ಯ ಸಮಂತತಃ ॥ 24

ಶನೈಃಶನೈರುಪರಮೇತ್
ಬುದ್ಧ್ಯಾ ಧೃತಿಗೃಹೀತಯಾ ।
ಆತ್ಮಸಂಸ್ಥಂ ಮನಃ ಕೃತ್ವಾ
ನ ಕಿಂಚಿದಪಿ ಚಿಂತಯೇತ್ ॥ 25

ಮನಸ್ಸಿನ ಸಂಕಲ್ಪದಿಂದ ಹುಟ್ಟುವ ಬಯಕೆಗಳನ್ನೆಲ್ಲ ಸಂಪೂರ್ಣವಾಗಿ ಬಿಟ್ಟು ಮನಸ್ಸಿನಿಂದಲೇ ಇಂದ್ರಿಯಗಳನ್ನು ಎಲ್ಲ ಕಡೆಯಿಂದಲೂ ನಿಯಂತ್ರಿಸಿ, ಧೈರ್ಯ ಪಡೆದ ಬುದ್ಧಿಬಲದಿಂದ ಮೆಲ್ಲಮೆಲ್ಲಗೆ ವಿಷಯಗಳಿಂದ ನಿವೃತ್ತನಾಗಬೇಕು. ಮನಸ್ಸನ್ನು ಆತ್ಮನಲ್ಲಿ ನೆಲೆಗೊಳಿಸಿ ಬೇರೆ ಏನನ್ನೂ ಚಿಂತಿಸಬಾರದು.

ಯತೋಯತೋ ನಿಶ್ಚರತಿ
ಮನಶ್ಚಂಚಲಮಸ್ಥಿರಮ್ ।
ತತಸ್ತತೋ ನಿಯಮ್ಯೈತತ್
ಆತ್ಮನ್ಯೇವ ವಶಂ ನಯೇತ್ ॥ 26

ಒಂದು ಕಡೆ ನಿಲ್ಲದೆ ಹರಿದಾಡುವ ಮನಸ್ಸು ಯಾವ ಯಾವ ವಿಷಯಗಳ ಬೆನ್ನು ಹಿಡಿದು ಹೊರಕ್ಕೆ ಹೊರಡುತ್ತದೋ ಆಯಾ ವಿಷಯಗಳಿಂದ ಅದನ್ನು ಹಿಮ್ಮೆಟ್ಟಿಸಿ ಪರಮಾತ್ಮನಲ್ಲಿಯೇ ನೆಲೆಗೊಳಿಸಬೇಕು.

ಪ್ರಶಾಂತಮನಸಂ ಹ್ಯೇನಂ
ಯೋಗಿನಂ ಸುಖಮುತ್ತಮಮ್ ।
ಉಪೈತಿ ಶಾಂತರಜಸಂ
ಬ್ರಹ್ಮಭೂತಮಕಲ್ಮಷಮ್ ॥ 27

ಶಾಂತವಾದ ಮನಸ್ಸುಳ್ಳ, ರಜೋಗುಣದ ದೋಷಗಳನ್ನು ದೂರೀಕರಿಸಿಕೊಂಡ, ಪಾಪಗಳನ್ನು ಕಳೆದುಕೊಂಡು ಬ್ರಹ್ಮನಲ್ಲಿ ನೆಲೆಗೊಂಡ ಇಂಥ ಯೋಗಿ ಉತ್ತಮವಾದ ಸುಖವನ್ನು ಪಡೆಯುತ್ತಾನೆ.

ಯುಂಜನ್ನೇವಂ ಸದಾತ್ಮಾನಂ
ಯೋಗೀ ವಿಗತಕಲ್ಮಷಃ ।
ಸುಖೇನ ಬ್ರಹ್ಮಸಂಸ್ಪರ್ಶ
ಅತ್ಯಂತಂ ಸುಖಮಶ್ನುತೇ ॥ 28

ಪಾಪಗಳನ್ನೆಲ್ಲ ಕಳೆದುಕೊಂಡ ಯೋಗಿಯು ಹೀಗೆಯೇ ಸದಾ ಮನಸ್ಸನ್ನು ಭಗವಂತನಲ್ಲಿ ನೆಲೆಗೊಳಿಸಿದಾಗ ಅನಾಯಾಸವಾಗಿ ಬ್ರಹ್ಮನೊಡನೆ ಕೂಡಿರುವುದೆಂಬ ಶಾಶ್ವತವಾದ ಅನಂತವಾದ ಸುಖವನ್ನು ಅನುಭವಿಸುವನು.

ಸರ್ವಭೂತಸ್ಥಮಾತ್ಮಾನಂ
ಸರ್ವಭೂತಾನಿ ಚಾತ್ಮನಿ ।
ಈಕ್ಷತೇ ಯೋಗಯುಕ್ತಾತ್ಮಾ
ಸರ್ವತ್ರ ಸಮದರ್ಶನಃ ॥ 29

ಈ ಬಗೆಯ ಯೋಗದಿಂದ ಮಾಗಿದ ಮನಸ್ಸುಳ್ಳವನು ಎಲ್ಲ ವಿಷಯಗಳನ್ನೂ ಒಂದೇ ರೀತಿಯಲ್ಲಿ ಕಾಣುತ್ತ ಭಗವಂತನು ಎಲ್ಲ ಪ್ರಾಣಿಗಳಲ್ಲಿ ತುಂಬಿರುವಂತೆಯೂ ಎಲ್ಲ ಪ್ರಾಣಿಗಳು ಭಗವಂತನನ್ನು ಆಶ್ರಯಿಸಿಕೊಂಡಿರುವಂತೆಯೂ ಕಾಣುತ್ತಾನೆ.

ಯೋ ಮಾಂ ಪಶ್ಯತಿ ಸರ್ವತ್ರ
ಸರ್ವಂ ಚ ಮಯಿ ಪಶ್ಯತಿ ।
ತಸ್ಯಾಹಂ ನ ಪ್ರಣಶ್ಯಾಮಿ
ಸ ಚ ಮೇ ನ ಪ್ರಣಶ್ಯತಿ ॥ 30

ಯಾವನು ಹೀಗೆ ನನ್ನನ್ನು ಎಲ್ಲೆಡೆಯೂ ಕಾಣುತ್ತಾನೋ ಮತ್ತು ಎಲ್ಲವನ್ನೂ ನನ್ನಲ್ಲಿ ಕಾಣುತ್ತಾನೋ ಅವನನ್ನು ನಾನು ಕೈಬಿಡಲಾರೆ. ಅವನು ನನ್ನನ್ನು ಮರೆಯಲಾರ.

ಸರ್ವಭೂತಸ್ಥಿತಂ ಯೋ ಮಾಂ
ಭಜತ್ಯೇಕತ್ವಮಾಸ್ಥಿತಃ ।
ಸರ್ವಥಾ ವರ್ತಮಾನೋಽಪಿ
ಸ ಯೋಗೀ ಮಯಿ ವರ್ತತೇ ॥ 31

ಎಲ್ಲೆಡೆಯೂ ಇರುವ ಭಗವಂತನೊಬ್ಬನೇ ಎಂದು ತಿಳಿದು ನನ್ನನ್ನು ಭಜಿಸುವ ಜ್ಞಾನಿಯು ಹೇಗಿದ್ದರೂ (ಮಾಡುತ್ತಿದ್ದರೂ, ಮಾಡದಿದ್ದರೂ) ನನ್ನಲ್ಲಿರುತ್ತಾನೆ.

ಆತ್ಮೌಪಮ್ಯೇನ ಸರ್ವತ್ರ
ಸಮಂ ಪಶ್ಯತಿ ಯೋಽರ್ಜುನ ।
ಸುಖಂ ವಾ ಯದಿ ವಾ ದುಃಖಂ
ಸ ಯೋಗೀ ಪರಮೋ ಮತಃ ॥ 32

ಅರ್ಜುನ, ಯಾವನು ಎಲ್ಲ ಪ್ರಾಣಿಗಳಲ್ಲಿಯೂ ಸುಖವಾಗಲೀ ದುಃಖವಾಗಲೀ ತನ್ನಂತೆಯೇ ಎಂದು ತಿಳಿಯುತ್ತಾನೋ ಆ ಜ್ಞಾನಿಯು ಎಲ್ಲರಿಗಿಂತ ಮೇಲೆನಿಸುವನು.

(29ನೇ ಪುಟ ನೋಡಿ)

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.

* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.

* ಸರತಿಯ ಸಾಲಿನ ಕೋಣೆಗಳಲ್ಲಿ ಕಾಫಿಬೋರ್ಡ್‌ನವರ ಅಲ್ಪಾಹಾರ ಸೌಲಭ್ಯ.

* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.

* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು.

* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.

* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ

* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್ ಪ್ರದರ್ಶನ, ಭಕ್ತಿ ಸಂಗೀತ.

* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ 7-ನೇ ಮೈಲಿಯ ಬಳಿ ವೈದ್ಯಸೌಲಭ್ಯ, ಉಪಹಾರ ಸೌಲಭ್ಯ. ಗೋವಿಂದ ಪ್ರಸಾದ ಕ್ಯಾಂಟೀನ್,

* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ

* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ. ಹಾಗೂ ಉಚಿತ ಬಸ್ ಸೌಕರ್ಯ.

* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.

* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ.

* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ.

## ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.

ಗಮನಿಕೆ : ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ 8-30 ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೇ ಪ್ರಧಾನ ಅಂಚೆ ಕಚೇರಿಯು ರಾತ್ರಿ 10—30 ರಿಂದ 1—00 ಗಂಟೆಯವರೆಗೆ ಕೆಲಸಮಾಡುತ್ತದೆ.

# ಕನಕದಾಸರು ಹಾಗೂ ತ್ಯಾಗರಾಜರು

ಕನ್ನಡ ಕೀರ್ತನಕಾರರಲ್ಲಿ ಪುರಂದರದಾಸರು ಮತ್ತು ಕನಕದಾಸರಿಗೆ ಪ್ರತ್ಯೇಕಸ್ಥಾನವಿದೆ. ಅದೇ ರೀತಿಯಲ್ಲಿ ತೆಲುಗು ವಾಗ್ಗೇಯಕಾರರಲ್ಲಿ ಅನ್ನಮಯ್ಯ ಮತ್ತು ತ್ಯಾಗರಾಜರಿಗೆ ಗೌರವ ಸ್ಥಾನವಿದೆ. ಕನಕದಾಸರು 15 ನೆಯ ಶತಮಾನದ ಕೊನೆಯದಶಕದಿಂದ 16ನೆಯ ಶತಮಾನದ 8ನೇ ದಶಕದವರೆಗೆ ಬಾಳಿದವರು. ತ್ಯಾಗರಾಜರು 18ನೇ ಶತಮಾನದ ಉತ್ತರಾರ್ಧದಿಂದ 19 ನೇ ಶತಮಾನ ಪೂರ್ವಾರ್ಧದವರೆಗೆ ಜೀವಿಸಿದವರು. ಇವರ ಜೀವನ ಮತ್ತು ಕೀರ್ತನೆಗಳಲ್ಲಿ ಹಲವಾರು ಸಾಮ್ಯಗಳು, ಕೆಲವು ವೈಷಮ್ಯಗಳು ಕಾಣುತ್ತವೆ.

ಇವರಿಬ್ಬರೂ ವರಪುತ್ರರು. ತಿರುಪತಿ ವೆಂಕಟ ರಮಣನ ವರದಿಂದ ಜನಿಸಿದ ಪುತ್ರರು ಕನಕ ದಾಸರು, ತ್ಯಾಗರಾಜಸ್ವಾಮಿ ಕೃಪೆಯಿಂದ ಹುಟ್ಟಿದವರು ತ್ಯಾಗರಾಜರು. ಹಾಲು ಮತಸ್ಥ ಕುರುಬರಾಗಿ ಹುಟ್ಟಿ, ಢಣಾಯಕ ಅಧಿಕಾರವನ್ನು ನಡೆಸಿ, ಕನಕ ಕೊಪ್ಪರಿಗೆಗೆ ಅಧಿಕಾರಿಯಾಗಿ ದಾಸರಾದವರು ಕನಕನಾಯಕರು. ತ್ಯಾಗರಾಜರು ಬಾಲ್ಯದಿಂದ ಭಕ್ತರು. ದಾಸರಿಗೆ ಕೋಣ ಮಂತ್ರ ಜಪವು ಅವರನ್ನು ವ್ಯಾಸರಾಯರಿಗೆ ಸನ್ನಿಹಿತರನ್ನಾಗಿಸಿತು. ರಾಮಕೃಷ್ಣ ಯತೀಂದ್ರರು ತ್ಯಾಗರಾಜರ ಸಾತ್ವಿಕಭಕ್ತಿಗೆ ಉಪಾಯ ಹೇಳಿದವರು. ತೊಂಬತ್ತು ವರ್ಷಕಾಲ ಜೀವಿಸಿ ಕಡೆಗಾಲ ಕಾಗಿನೆಲೆಯಲ್ಲಿ ದಾಸರು ಸಿದ್ಧಿ ಹೊಂದಿದರೆಂದು ಹೇಳುತ್ತಾರೆ. ತ್ಯಾಗರಾಜರು ತಿರುವೈಯಾರ್‌ನಲ್ಲಿ ಬೃಂದಾವನಸ್ಥರಾದರು. ಇವರಿಬ್ಬರ ಆರಾಧನೆಗಳು ಪ್ರತಿವರುಷ ವೈಭವದಿಂದ ನಡೆಯುತ್ತವೆ.

ನಳಚರಿತ್ರೆ, ರಾಮಧಾನ್ಯಚರಿತ್ರೆ, ಹರಿಭಕ್ತಿಸಾರ, ಕನಕದಾಸರ ಕೃತಿಗಳು. ಪ್ರಹ್ಲಾದ ಭಕ್ತಿ ವಿಜಯ, ನೌಕಾಚರಿತ್ರೆ, ಸೀತಾರಾಮವಿಜಯ, 24 ಸಾವಿರ ಕೀರ್ತನೆಗಳು ತ್ಯಾಗರಾಜರ ರಚನೆಗಳು. ಕನಕದಾಸರಿಗೆ ಕವಿಖ್ಯಾತಿಯಿದೆ. ಕೀರ್ತನಕಾರರೆಂಬುವ ಗಣನೆಯೂ ಉಂಟು. ಆದರೆ ತ್ಯಾಗರಾಜರಿಗೆ ವಾಗ್ಗೇಯಕಾರ ಖ್ಯಾತಿ ಮಾತ್ರವೇ.

ಅನುಕೂಲದಾಂಪತ್ಯ ಕನಕದಾಸರು, ತ್ಯಾಗರಾಜರು ಹೊಂದಿದ ಅದೃಷ್ಟ. ಕನಕದಾಸರು ರಸಿಕ ವಿಮರ್ಶಕಳಾದ ತಮ್ಮ ಪ್ರೇಯಸಿಯಿಂದ, ಕಾವ್ಯರೀತಿಯ ವಿಷಯುಕವಾದ ತಮ್ಮಮನದ ಇಂಗಿತವನ್ನು ಹೀಗೆ ಆಡಿಸಿದ್ದಾರೆ.

ಮಾಣದೆ ಅರಸುವಂತೆ ಮಾಡದಿರಧಿಕ ಸು
ಜಾಣರ ಜ್ಞಾನ ಲೋಚನಕೆ
ಕಾಣಬರ್ಪಂತ ಕನ್ನಡ ವಾಕ್ಯದೆ ನೆರೆ
ಜಾಣ ಸತ್ಕೃತಿಯ ವಿಸ್ತರಿಸು

ತನ್ನ ಮನೆ ಗುರುಕುಲವಾದರೂ ತಾನು ಉಂಛ ವೃತ್ತಿ ಅವಲಂಬಿಸಿದರೂ ಒಂದು ಕಷ್ಟವು ಇಲ್ಲದೆ ಸಂಸಾರ ಸಾಗಿಸಿದವರು ತ್ಯಾಗರಾಜರ ಧರ್ಮಪತ್ನಿ.

ಇವರಿಬ್ಬರೂ ಮಹಿಮಾನ್ವಿತರು. ಆದರೆ ಅವರು ತಮಗಾಗಿ ಮಹಿಮೆಗಳನ್ನು ತೋರಿಸಲಿಲ್ಲ. ತಮ್ಮ ಭಕ್ತರಿಗಾಗಿ ದೇವರೇ ಮಹಿಮೆಗಳಿಗೆ ಕಾರಣವಾಗಿದ್ದಾನೆ. ಕನಕದಾಸರಿಗೆ ಉಡುಪಿಯಲ್ಲಿ ಶ್ರೀಕೃಷ್ಣನ ದರ್ಶನ ಸಿಕ್ಕದವೇಳೆ, ಹಾಡುಗಳಿಂದ ಪರವಶನಾಗಿ ಆ ದೇವರೇ ಪಶ್ಚಿಮಾಭಿಮುಖನಾದನೆಂಬುವುದು ಒಂದು ಪವಾಡ, ತಿರುಪತಿ ವೆಂಕಟರಮಣನ ಗುಡಿಯಲ್ಲಿ ಪ್ರವೇಶಮಾಡಿ ಅದೃಶ್ಯರಾದರೆಂಬುವುದು ಮತ್ತೊಂದು ಪವಾಡ. ಇದೇ ಬಗೆಯಲ್ಲಿ ತ್ಯಾಗರಾಜರು ತಿರುಪತಿಯಲ್ಲಿ ವೆಂಕಟರಮಣನ ದರ್ಶನ ಸಿಕ್ಕದವೇಳೆ ಅವರು 'ತೆರ ತೀಯಗರಾದಾ' ಕೀರ್ತನೆ ಹಾಡಿದಾಗ ಸ್ವಾಮಿ ದರ್ಶನವಾಯಿತೆಂಬುವುದು ಒಂದು ಪವಾಡ. 'ನಾ ಜೀವನಾಧಾರ' ಕೃತಿ ಹಾಡಿದ ವೇಳೆ ಸತ್ತುಹೋದ ಒಬ್ಬ ಭಕ್ತ ಬದುಕಿದನೆಂಬುವುದು ಮತ್ತೊಂದು ಪವಾಡ.

ಕನಕದಾಸರಾಗಲೀ, ತ್ಯಾಗರಾಜರಾಗಲೀ ಶೈವ ವೈಷ್ಣವ ವರ್ಗಕ್ಕೆ ಸೇರಿದವರಲ್ಲ. ಅವರ ಕೃತಿಗಳಲ್ಲಿ ಸಹನಭಾವ ಕಾಣುತ್ತದೆ. ಕನಕದಾಸರು 'ವರವ ಕೊಡು ಎನಗೆ ವಾಗ್ದೇವಿ ನಿನ್ನ' ಎಂದು ಶಾರದಾಸ್ತುತಿ ಮಾಡುತ್ತಾರೆ. 'ನೋರೆ ಕಪ್ಪಿನ ಭಾವ ಮೊರದಗದಲದ ಕಿವಿ ಕೋರೆದಾಡೆಯ' ಎಂದು ಗಣನಾಥನನ್ನು ವಂದಿಸುತ್ತಾರೆ. 'ಶಿವಶಿವ ಎನ್ನಿರೋ' ಎಂದು ಶಿವಕೀರ್ತನೆ ಹಾಡುತ್ತಾರೆ. ತ್ಯಾಗರಾಜರು ಅದ್ವೈತಿಗಳಾಗಿ ಇದ್ದಕಾರಣ ಸಕಲ ದೇವತಾಸ್ತುತಿ ಮಾಡಿದ್ದಾರೆ. ಕನಕದಾಸರು 'ಆರು ಬಲ್ಲರು ಹರಿಹರರ ಮಹಿಮೆಯನ್ನು ವಾರಿಜೋದ್ಭವ ಸುರೇಂದ್ರಾದಿಗಳವಲ್ಲ' ಎಂಬ ಕೀರ್ತನೆಯಲ್ಲಿ 'ಈಶ ವಿಷ್ಣುನಿಂದ ನಾರಾಯಣಾಸ್ತ್ರ ಪಡೆದ. ಶೌರಿ ಶಿವನ ಸ್ತೋತ್ರಮಾಡಿ ಚಕ್ರವನ್ನು ಪಡೆದ. ಇವರಿಬ್ಬರೂ ತಮ್ಮ ತಮ್ಮ ಭಕ್ತರ ಬಾಗಿಲು ಕಾಯ್ವರು, ಎಂದು ಹಾಡಿದರು. ತ್ಯಾಗರಾಜಸ್ವಾಮಿಯವರು ಒಂದು ಕೀರ್ತನೆಯಲ್ಲಿ 'ಶಿವಮಾಧವ ಭೇದಮು ಸೇಯರಾದು', ಶಿವಮಾಧವ ಭೇದ ಮಾಡಬಾರದೆಂದು ಬಿನ್ನಹ ಮಾಡುತ್ತಾರೆ.

ಇವರಿಬ್ಬರ ರಚನೆಗಳಲ್ಲಿ ನರಸಿಂಹಸ್ತುತಿ ಕಡಿಮೆ. ಒಂದು ಕೀರ್ತನೆಯಲ್ಲಿ 'ನಾರಸಿಂಹನ ದಿವ್ಯನಾಮವನು ನೆನೆದರೆ ಘೋರಪಾತಕವೆಲ್ಲ ತೊಲಗಿ ಹೋಗುವುದು' ಎನ್ನುತ್ತಾರೆ. 'ಅವು ದೊಳ್ಳೆಯದೊ ನಿನ್ನಂಗ – ಚೆಲುವ ದೇವ ಬಂಕಾಪುರದ ಲಕುಮಿ ನರಸಿಂಗ'ನೆಂದು ಹೊಗಳಿದ್ದಾರೆ.

ಏನುಕಾರಣ ಬಾಯತೆರೆದಿ– ಪೇಳೆಲೋ
ದಾನವಾಂತಕ ಅಹೋಬಲ ನಾರಸಿಂಹನೆ



ಡಾ॥ ಕೆ. ಸರ್ವೋತ್ತಮನ್

# ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಅಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಆಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ-517507
ಚಿತ್ತೂರು ಜಿಲ್ಲೆ, ಆಂ. ಪ್ರ.

ಎಂದು ಅಹೋಬಲ ನಾರಸಿಂಹನನ್ನು ಆಶ್ಚರ್ಯದಿಂದ ಪ್ರಶ್ನಿಸುತ್ತಾರೆ. ತ್ಯಾಗರಾಜರು ಘಟಿಕಾಚಲ ನರಸಿಂಹನನ್ನು ಸೇವಿಸಿ 'ನರಸಿಂಹ ನನು ಬ್ರೋವವೇ ಶ್ರೀಲಕ್ಷ್ಮೀ, ಶ್ರೀ ನಾರಸಿಂಹ ಮಾಂ ಪಾಹಿ ಕ್ಷೀರಾಬ್ಧಿ ಕನ್ಯಕಾರಮಣ'ನೆಂದು ಹಾಡಿದರು.

ದಾಸರ ಸಾಹಿತ್ಯದಲ್ಲಿ ಹನುಮತ್‌ಸ್ತವ ಅಧಿಕವಾಗಿ ಕಾಣುತ್ತದೆ. ಆದರೆ ಕನಕದಾಸರ ಕೃತಿಗಳಲ್ಲಿ ಕಡಿಮೆ.

ಅರಸಿನಂತೆ ಬಂಟನೊ ಹನುಮಂರಾಯ
ದೊರೆಯಂತೆ ಸೇವಕನೊ

* * * *

ಎನ್ನ ಕಂದ ಹಳ್ಳಿಯ ಹನುಮಾ
ಪರಮಪದವಿಯನೀವ ಗುರುಮುಖ್ಯಪ್ರಾಣನೆ

* * * *

ರಂಗನಾಥನೆಂದರೆ ಇವರಿಬ್ಬರಿಗೂ ತನ್ಮಯತ್ವ ಬರುತ್ತದೆ. ವನ ಉಪವನಗಳು, ಘನಸರೋವರಗಳು, ಕನಕಗೋಪುರಗಳು ಕನಕದಾಸರಿಗೆ ಆನಂದ ಕೊಡುತ್ತದೆ. ಅವರು ರಂಗನಾಥನು ಇರಲಿಕ್ಕೆ ಜಂಗುಳಿ ದೈವಗಳೇಕೆ ? ಎಂದು ಪ್ರಶ್ನಿಸುತ್ತಾರೆ. ಅವರ ಮಾತು ಮಾತಿಗೆ ರಂಗ ನಾಮ ಸೇರಿ ಬರುತ್ತದೆ.

ಸಾಕುಸಾಕು ಮನುಜಸೇವೆಯು
ಶ್ರೀರಂಗರಾಯ

* * * *

ನೀನೇನ ಮಾಡಲಾಪೆ ರಂಗಯ್ಯ

* * * *

ತನು ನಿನ್ನದು ಜೀವನ ನಿನ್ನದು ರಂಗ

* * * *

ಏಕೆ ನೀನಿಲ್ಲಿ ಪವಡಿಸಿದೆ-ಜಗ
ದೇಕ ವಿಖ್ಯಾತ ಪಶ್ಚಿಮರಂಗಧಾಮ

* * * *

ಬಾರೋ ನಮ್ಮ ಮನೆತನಕ ಕಾವೇರಿ ರಂಗ

* * * *

ತ್ಯಾಗರಾಜರ ರಂಗೇಶನ ಕೀರ್ತನೆಗಳು.

ಚೂತಾಮು ರಾರೇ ಸುದತುಲಾರ ರಂಗಪತಿನಿ

* * * *

ರಾಜುವೆಡಲೆ ಚೂತಾಮು ರಾರೆ
ಕಸ್ತೂರಿ ರಂಗ

* * * *

ಓ ರಂಗಶಾಯಿ, ಪಿಲಿಚಿತೇ
ಓಯನುಚು ರಾರಾದಾ
ವಿನರಾದಾ ನಾ ಮನವಿ ಕನಕಾಂಗ
ಕಾವೇಟಿ ರಂಗ

ಕರುಣ ಜೂಡವಯ್ಯ ಮಾಯಯ್ಯ
ಕಾವೇಟಿ ರಂಗಯ್ಯ

ಕಾಗಿನೆಲೆಯ ಕೇಶವ ಕನಕದಾಸರ ಇಷ್ಟದೈವ. 'ಸಾಧುಸಜ್ಜನ ಸತ್ಯಗಣಕಿದಿರುಂಟೆ ಆದಿಕೇಶವ ನಲ್ಲದೆ ದೈವವುಂಟೆ' ಎಂಬ ದೇವರನಾಮವನ್ನೇ ಅವರು ಕೀರ್ತನೆಗಳಲ್ಲಿ ಮುದ್ರೆಯಾಗಿ ಬಳಸಿದ್ದಾರೆ. ಈ ಅಂಕಿತ ಮುದ್ರೆ ಕೀರ್ತನೆಯ ಕೊನೆ ಚರಣದಲ್ಲಿ ಬರುತ್ತದೆ. ತ್ಯಾಗರಾಜರ ಆರಾಧ್ಯದೈವ ಶ್ರೀರಾಮಚಂದ್ರ 'ಧರನು ನೀ ಸರಿ ದೈವಮು ಗಾನರಾ', 'ಪದಿ ವೇಷಮುಲಲೋ ರಾಮವೇಷಮು ಬಹು ಬಾಗು' ಎಂಬ ಕೀರ್ತನೆಗಳಲ್ಲಿ ಸ್ವನಾಮವನ್ನೇ ಮುದ್ರೆಯಾಗಿ ಬಳಸಿಕೊಂಡಿದ್ದಾರೆ ಕನಕದಾಸರಿಗೆ ರಾಮಭಕ್ತಿ ಉಂಟು.

ಶ್ರೀರಾಮನೆನ್ನಿರಿ ಮೂಜಗದವರೆಲ್ಲ
ರಾಮ ಗೋವಿಂದ ಹರೇ

ಕೀರ್ತನೆಗಳು ಮತ್ತು ರಾಮಧಾನ್ಯ ಚರಿತೆ ಕೃತಿಗಳು ಅವರಿಗೆ ಇದ್ದ ರಾಮಭಕ್ತಿಗೆ ಸಾಕ್ಷಿಯಾಗುತ್ತವೆ.

ಇವರಿಬ್ಬರೂ ಸಾತ್ತ್ವಿಕ ಭಕ್ತಿಗೆ ಪ್ರಾಧಾನ್ಯ ಕೊಟ್ಟವರು. ಕನಕದಾಸರು;

ಉರಿಮಾರಿ ಚಾಮುಂಡಿ ಶಕ್ತಿಗಳಿಗೆ
ಕುರಿ ಕೋಣ ನೈವೇದ್ಯ ಧೂಪ ದೀಪಗಳಿಂದ
ಪರಮಭಕ್ತಿಯ ಮಾಡಿ ಪೂಜಿಸುವರಯ್ಯ

ಎಂದು ನಿಂದಿಸಿದ್ದಾರೆ.

ತ್ಯಾಗರಾಜರು ;

ಭಕ್ತಿಬಿಚ್ಚಮಿಯ್ಯವೇ
ಸಾತ್ತ್ವಿಕ ಭಕ್ತಿಬಿಚ್ಚಮಿಯ್ಯವೇ

ಎಂದು ಪ್ರಾರ್ಥನೆ ಮಾಡಿದ್ದಾರೆ.

ನವವಿಧ ಭಕ್ತಿವೈವಿಧ್ಯಗಳನ್ನು ಅವರ ಕೀರ್ತನೆಗಳಲ್ಲಿ ನೋಡಬಹುದು.

ನಾಮ ಕೀರ್ತನೆ :

ನಾರಾಯಣ ನಿನ್ನ ನಾಮವೊಂದಿರುತಿರೆ
ಬೇರೊಂದು ನಾಮವಿನ್ನೇತಕಯ್ಯ

'ಈಶ ನಿನ್ನ ಚರಣ ಭಜನೆ' ಎಂಬ ಕೀರ್ತನೆಯಲ್ಲಿ ದ್ವಾದಶನಾಮಗಳು ನಾರಾಯಣ, ಮಾಧವ, ಗೋವಿಂದ, ಮಧುಸೂದನ, ತ್ರಿವಿಕ್ರಮ, ವಾಮನಾದಿ ನಾಮಗಳು ಬರುತ್ತವೆ.

ರಾಮ ರಾಮ ಕೃಷ್ಣಯನರೇ ರಾತಿರಿ ಪಗಲು
ಮಾಸೀತಾ

(27ನೇ ಪುಟ ನೋಡಿ)



# ಹರಿಭಕ್ತಿಸಾರ

ಕನಕದಾಸರು ಕರ್ನಾಟಕ ಹರಿದಾಸ ಪರಂಪರೆಯಲ್ಲಿ ಪುರಂದರದಾಸರ ಜೊತೆಗೆ ನೆನಪಿಗೆ ಬರುವ ಹಿರಿಯ ಜೀವ. ವ್ಯಾಸರಾಯರ ಶಿಷ್ಯರಾಗಿ, ಪುರಂದರದಾಸರೊಟ್ಟಿಗೆ ದಾಸಕೂಟದ ಮುಂಚೂಣಿಯಲ್ಲಿ ತಂಬೂರಿ ಹಿಡಿದು ತಾಳಲಯ ಬದ್ಧವಾಗಿ ಹರಿಭಕ್ತಿಯ ಗಂಧವನ್ನು ಕನ್ನಡದಲ್ಲಿ ಹರಡಿದವರು. ನಾರದಾಂಶರೆಂದು ಪುರಂದರರನ್ನು ಗೌರವಿಸುವಂತೆಯೇ ಯವಾಂಶರೆಂದು ಕನಕದಾಸರನ್ನೂ ಗೌರವಿಸುವುದು ಪರಂಪರೆಯಲ್ಲಿ ಸಿದ್ಧವಾಗಿದೆ. ಇಬ್ಬರೂ ಕನ್ನಡ ನುಡಿಯ, ಮಿಗಿಲಾಗಿ ಹರಿಭಕ್ತಿಯ ಸುಧೆ ಹರಿಸುವಲ್ಲಿ ಅಶ್ವಿನೀ ದೇವತೆಗಳಂತೆಯೇ ಎನ್ನಬಹುದಾದರೂ ಕನಕದಾಸರದು ಬಹುಮುಖಪ್ರತಿಭೆ. ಅವರು ಹರಿದಾಸರಲ್ಲಿ ಕವಿಗಳು.

ಅಸಂಖ್ಯ ಕೀರ್ತನೆಗಳೇ ಅಲ್ಲದೆ ನಳಚರಿತ್ರೆ, ಮೋಹನ ತರಂಗಿಣಿ, ರಾಮಧಾನ್ಯ ಚರಿತ್ರೆ, ಹರಿಭಕ್ತಿಸಾರ ಕೃತಿಗಳನ್ನೂ ಅವರು ರಚಿಸಿದರು. ನಾಲ್ಕು ಕಾವ್ಯಗಳೂ ನಾಲ್ಕೂ ದಿಕ್ಕಿಗೆ ನಿಂತು ವೈವಿಧ್ಯಮಯವಾಗಿದ್ದು, ಕನಕದಾಸರ ಕಾವ್ಯ ಪ್ರತಿಭೆಗೆ ಸಾಕ್ಷಿ ನುಡಿಯುತ್ತವೆ. ನಳಚರಿತ್ರೆ ಮಹಾಭಾರತದಲ್ಲಿ ಬರುವ ನಳದಮಯಂತಿಯರ ಕಥೆಯನ್ನು ಭಾಮಿನೀ ಷಟ್ಪದಿಯಲ್ಲಿ ವಿವರಿಸಿದ ಕಥೆಯಾ೨ರೆ, ಮೋಹನ ತರಂಗಿಣಿ ಭಾಗವತದ ಆಧಾರಿತ ಕಥೆ. ಕೃಷ್ಣ ಬಾಣಾಸುರನನ್ನು ಕೊಲ್ಲುವ, ಉಷಾ ಅನಿರುದ್ಧರ ಪ್ರಣಯವಿವರದ ಕಥೆ ಸಾಂಗತ್ಯದಲ್ಲಿ ಮೂಡಿ ಬಂದಿದೆ. ರಾಮಧಾನ್ಯ ಚರಿತೆ ಒಂದು ಅಣಕು ಮಹಾಕಾವ್ಯ. ಪರಿಪೂರ್ಣ ಸ್ವತಂತ್ರ ಕೃತಿ, ಭಾಮಿನೀ ಷಟ್ಪದಿಯಲ್ಲಿ ರಚಿತವಾಗಿದೆ. ಹರಿಭಕ್ತಿಸಾರ ಒಂದು ಶತಕ. 110 ಭಾಮಿನೀ ಷಟ್ಪದಿಗಳಲ್ಲಿ ಹರಿದರುವ ಶರಣಾಗತಿಯ ಸ್ತೋತ್ರ ರತ್ನಮಾಲೆ. ಪ್ರಸ್ತುತ ಹರಿಭಕ್ತಿಸಾರವೇ ಈ ಲೇಖನದ ವಸ್ತು.

ಶ್ರೀಮತಿ ಎಸ್. ವಿ. ಹೇಮಾವತಿ

ಭಾರತೀಯ ಭಾಷೆಗಳಲ್ಲೆಲ್ಲ ಸಾಮಾನ್ಯವಾಗಿ ಶತಕಗಳಿವೆಯಾಗಿ, ಶತಕಗಳು ಕನ್ನಡದಲ್ಲಿ ಸುಮಾರು ಹನ್ನೆರಡನೆಯ ಶತಮಾನದಲ್ಲೇ ಆರಂಭವಾಗಿದ್ದಿರಬೇಕು. ಮರಿಯಪ್ಪ ಭಟ್ಟರೆನ್ನುವಂತೆ ಅಷ್ಟೋತ್ತರ ನಾಮ, ಸಹಸ್ರನಾಮ ಮೊದಲಾದ ಸ್ತೋತ್ರ ಸಾಹಿತ್ಯ ಶತಕಗಳ ಉಗಮಕ್ಕೆ ಕಾರಣವಾಗಿದ್ದಿರಬಹುದು. ಈ ಶತಕಗಳು ಸಾಮಾನ್ಯವಾಗಿ ನೂರು ಅಥವಾ ಅದರಾಚೆ ಒಂದು ಎಂಟು ಹತ್ತು ಪದ್ಯಗಳನ್ನು ಒಳಗೊಂಡಿದ್ದು ಪ್ರತಿಯೊಂದು ಪದ್ಯವೂ ತಂತಾನೆ ಬೇರೆಯಾಗಿಯೇ ತಿಳಿಯಲು ಅನುಕೂಲವಾಗಿರುತ್ತದೆ. ಜೊತೆಗೇ ಪ್ರತಿ ಪದ್ಯದ ಕೊನೆಯಲ್ಲೂ ಒಂದು ಮಕುಟವಿರುವುದು. ಹೀಗಾಗಿ ಹಿರಿಯರು ಹೇಳಿದಂತೆ ಇದು ಮಕುಟ ಸಮೇತವಾದ ಮುಕ್ತಕ ಗುಚ್ಛವೆಂದೂ ತಿಳಿಯಲ್ಪಡಬಹುದು. ಇವುಗಳ ವಸ್ತು ಸಾಮಾನ್ಯವಾಗಿ ಭಕ್ತಿ, ಶೃಂಗಾರ

ವೈರಾಗ್ಯ, ನೀತಿಗಳು. ಹರಿಹರನ ಪಂಪಾಶತಕ, ರಕ್ಷಾಶತಕ, ಸೋಮಕವಿಯ ಸೋಮೇಶ್ವರ ಶತಕ ಕನ್ನಡದಲ್ಲಿ ಪ್ರಸಿದ್ಧವಾಗಿವೆ. ಅಂತೆಯೇ ಹರಿಭಕ್ತಿಸಾರ. ಈ ಕೃತಿ ಕರ್ತೃವಿನ ಆತ್ಮನಿವೇದನೆಯಾಗಿದೆ. ಲೋಕ ಕಾರಣನ ಮುಂದೆ ನಿಂತ ಜೀವ ತನ್ನನ್ನು ತಾನು ರಕ್ಷಿಸಿಕೊಳ್ಳುವ ಮಾರ್ಗವನ್ನು ತಿಳಿಯದೆ ಅವನನ್ನು ತನ್ನ ರಕ್ಷಣೆಗಾಗಿ ಆಶ್ರಯಿಸಿರುವ ಭಾವ ಇಲ್ಲಿ ಪ್ರತಿಪದ್ಯದಲ್ಲೂ ಸ್ಫುಟವಾಗಿ ಮೂಡಿದೆ. ವೇದ ಪುರಾಣೇತಿಹಾಸಗಳಿಂದ ಆಯ್ದ ಸಂದರ್ಭಗಳ ಹಿನ್ನೆಲೆಯಲ್ಲಿ ಮನುಷ್ಯ ಜೀವನದ ಅಲ್ಪತೆ, ಹಿರಿಮೆ, ಭಯ, ಧೈರ್ಯ ಮೊದಲಾದುವನ್ನು ವಿವರಿಸುವ ಪ್ರಯತ್ನ ಪಡಲಾಗಿದೆ. ಶತಕಗಳೆಂದರೆ ಮುಕ್ತಕಗಳಂತೆ ಎಂದು ಹೇಳಲಾಗಿದೆ. ಆದರೆ ಒಂದು ಸಾಮಾನ್ಯ ವಸ್ತುವಿನ ಅಂತಸ್ಸೂತ್ರವಿರುವುದು ಎಲ್ಲ ಶತಕಗಳಿಗೂ ಸಹಜ ಗುಣ. ಇಲ್ಲಿ ಆ ಸೂತ್ರವೆಂದರೆ ಹೆಸರೇ ಸೂಚಿಸುವಂತೆ ಹರಿಭಕ್ತಿಯಾಗಿದೆ.

ಮೊದಲ ಹದಿನೈದು ಪದ್ಯಗಳು ಪ್ರಾರ್ಥನಾ ಗೀತೆಗಳು ಎನ್ನಬಹುದು. ಇಲ್ಲಿ ಹರಿಯನ್ನು ಅವನ ವಿವಿಧ ಹೆಸರುಗಳಿಂದ ಕರೆದು 'ರಕ್ಷಿಸು ನಮ್ಮನವರತ' ಎಂದು ಬೇಡಲಾಗಿದೆ. ಒಂದು ಪದ್ಯವನ್ನು ನೋಡಬಹುದು.

ಕ್ಷೀರವಾರಿಧಿ ಶಯನ ಶಾಂತಾ
ಕಾರ ವಿವಿಧ ವಿಚಾರ ಗೋಪೀ
ಜಾರ ನವನೀತ ಚೋರ ಚಕ್ರಾಧಾರ
ಭವದೂರ
ಮಾರಪಿತ ಗುಣಹಾರ ಸರಸಾ
ಕಾರ ರಿಪುಸಂಹಾರ ತುಂಬುರ
ನಾರದಪ್ರಿಯ ವರದ ರಕ್ಷಿಸು
ನಮ್ಮನವರತ

ಹದಿನಾರನೆಯ ಪದ್ಯದಿಂದ ನೇರವಾಗಿ ಭಗವಂತನನ್ನು ಮಾತನಾಡಿಸುತ್ತ ತನ್ನ ಕಾವ್ಯದ ಉದ್ದೇಶವನ್ನು ತಿಳಿಸತೊಡಗುತ್ತಾರೆ.

ಭಕ್ತಿಸಾರದ ಚರಿತೆಯನು ಹರಿ
ಭಕ್ತರಾಲಿಸುವಂತೆ ರಚಿಸುವೆ

– ಎಂದು ಹೇಳುತ್ತ 'ಸತ್ಕವಿಗಳವರಗ್ಗಳಿಕೆ ಎನಗಿನಿತಿಲ್ಲ' ಎಂದೂ ನುಡಿಯುತ್ತಾರೆ. ಮುಂದೆ ನುಡಿಯುತ್ತ 'ತಾವು ಗಿಳಿಮರಿಯೆಂದೂ ಪರಿಣತರು ಅದಕ್ಕೆ ಒಳ್ಳೆಯ ಮಾತುಗಳನ್ನು ಕಲಿಸಿ ಅದು ಮಾತನಾಡಲು ಕೇಳಿ ನಲಿಯುವಂತೆ ಭಗವಂತನ ನಾಮಾವಳಿಯನ್ನು ಹೊಗಳುವ ಶಕ್ತಿಯನ್ನಿತ್ತು ಆನಂದಿಸಬೇಕೆಂದೂ' ಭಗವಂತನನ್ನು ಕುರಿತು ಹೇಳುತ್ತಾರೆ.

ಹರಿಯನ್ನು ಜೀವರುಗಳ ತಾಯಿಯೆಂದು ಸೂಚಿಸುತ್ತ ನಡೆದಿರುವ ಪದ್ಯ ಸುಂದರವಾಗಿದ್ದು ಹೃದಯಕ್ಕೆ ಹತ್ತಿರವಾಗುತ್ತದೆ.

ಹಸಿವರಿತು ತಾಯ್ತನ್ನ ಶಿಶುವಿಗೆ
ಒಸಗಿ ಮೊಲೆ ಗೊಡುವಂತೆ ನೀ ಪೋ
ಷಿಸದೆ ಬೇರಿನ್ನಾರು ಪೋಷಕರಾಗಿ
ಸಲಹುವರು
ಬಸುರೊಳಗೆ ಬ್ರಹ್ಮಾಂಡ ಕೋಟಿಯ
ಪಸರಿಸಿದ ಪರಮಾತ್ಮ ನೀನೆಂ
ದುಸುರುತಿವೆ ವೇದಗಳು ರಕ್ಷಿಸು
ನಮ್ಮನವರತ

ಮಗುವಿನ ಮಾತಿಲ್ಲದೆಯೇ ಮಗುವಿನ ಹಸಿವನ್ನು ತಾಯಿ ತಿಳಿಯುವಳು ಎಂಬುದೂ, ಪರಮಾತ್ಮ ಬಸಿರೊಳಗೆ ಬ್ರಹ್ಮಾಂಡವನ್ನೇ ಹೊಂದಿದವನು ಎಂಬುದೂ ಇಲ್ಲಿ ಮುಖ್ಯವಾಗುತ್ತವೆ. ಮುಂದೆ ಈ ವಿಶ್ವಮಾತೆಯ ಬಂಧುಬಳಗವನ್ನು ವಿವರಿಸಿ ಅವರಲ್ಲೆಲ್ಲ ಹರಿಯೇ ಶ್ರೇಷ್ಠನೆಂದು ಸ್ಥಾಪಿಸಿ ನಡೆಯುತ್ತಾರೆ. 'ಹಗೆಯರಿಗೆ ವರವೀವರಿಬ್ಬರು ತೆಗೆಯಲರಿಯರು ಕೊಟ್ಟ ವರಗಳ ತೆಗೆದು ಕೊಡುವ ಸಮರ್ಥರಾರೀ ಜಗಕೆ ನಿನ್ನಂತೆ' ಎಂದು ಹೇಳುತ್ತ, ಮುಂದೆ ಹರಿಯ ಹಿರಿಮೆಗಳನ್ನು ನಿರೂಪಿಸುತ್ತಾರೆ ಕೃಷ್ಣಾವತಾರದಲ್ಲಿ ಹರಿ ಶಿಶುತನದಲ್ಲಿ, ಬಾಲ್ಯದಲ್ಲಿ– ತನ್ನ ಶತ್ರುಗಳನ್ನು ತಾನೇ ನಿವಾರಿಸಿಕೊಂಡದ್ದನ್ನೂ, ನಂತರ ಪಾಂಡವರ ಮೂಲಕ ಲೋಕ ಶತ್ರುಗಳನ್ನು ನಾಶ ಮಾಡಿದ್ದನ್ನೂ, ಒಟ್ಟಿಗೆ ಹೇಳುತ್ತ ಅವನಾಟಕ್ಕೆ ವಿಸ್ಮಯಪಡುತ್ತಾರೆ.

ಶಿಶುತನದ ಸಾಮರ್ಥ್ಯದಲಿ ಕೆಲ
ರಸುರರನು ಸಂಹರಿಸಿ ಚಕ್ರವ
ಬಿಸುಟು ಯೌವನ ಕಾಲದಲಿಯಾ
ಪಾಂಡುಸುತರಿಂದ
ವಸುಮತಿಯ ಭಾರವನಿಳುಹಿ ಸಾ
ಹಸದಿ ಮೆರೆದವನಾಗಿ ನೀ ಮೆ
ಚ್ಚಿಸಿದೆ ತ್ರಿಜಗವನೆಲ್ಲ ರಕ್ಷಿಸು
ನಮ್ಮನವರತ

ಶ್ರೀಹರಿಯ ನ್ಯಾಯಾನ್ಯಾಯ ವಿಚಕ್ಷಣೆಯ ಮರ್ಮ ಮಂದಮತಿ ಮಾನವನಿಗೆ ತಿಳಿದಿಲ್ಲ ಎಂಬುದನ್ನು ವಿವರಿಸುತ್ತ ಕರ್ಣ ಅಭಿಮನ್ಯುಗಳ ಹೆಸರುಗಳ ಉದಾಹರಣೆಯನ್ನು ನೀಡುತ್ತ

ಮಾಯಮಂತ್ರದ ಕುಟಿಲಗುಣವ
ನ್ಯಾಯವೊ ಸುನ್ಯಾಯವೋ ನಿ
ನ್ನಾಯವನು ನೀ ಬಲ್ಲೆ ರಕ್ಷಿಸು
ನಮ್ಮನವರತ

– ಎಂದು ವಿಚಾರವನ್ನು ಅವನಿಗೇ ಬಿಡುವುದೂ ಹೃದಯಸ್ಪರ್ಶಿಯಾಗುತ್ತದೆ.

ರಾಮಾಯಣವನ್ನು ಬರೆದ ವಾಲ್ಮೀಕಿಯ ಬಗ್ಗೆ ಹೇಳುತ್ತಾರೆ ಪರೋಕ್ಷವಾಗಿ, 'ನಿನ್ನ ನಾಮದೊಳಧಿಕವೆರಡಕ್ಷರವ ಬಣ್ಣಿಸುತ ಧನ್ಯನಾದನು ಮುನಿಕುಲದಿ ಸಂಪನ್ನನಾದನು ನೀನೊಲಿದ ಬಳಿಕಿನ್ನು ಪಾತಕವುಂಟೆ' ಎಂಬುದಾಗಿ. ಇದೆಲ್ಲ ಸರಿಯೇ ಆದರೂ ಕವಿಗೆ ವಿಮರ್ಶಕ ಬುದ್ಧಿ ಬಿಡದು. ಅವರಿಗೆ ಎಲ್ಲೋ ಅನುಮಾನವಿದ್ದೆ, ಎಂತಲೇ ನುಡಿಯುತ್ತಾರೆ.

ಹೆತ್ತ ಮಗಳನು ಮದುವೆಯಾದವ
ನುತ್ತಮನು ಗುರುಪತ್ನಿಗಳುಪಿದ
ಚಿತ್ತಜನ ಮಾವನು ಕೃತಘ್ನನು ನಿನಗೆ
ಮೈದುನನು
ಹೊತ್ತು ತಪ್ಪಿಸಿ ಕಾಮದಲಿ ಮುನಿ
ಪೋತ್ತಮನ ಮಡದಿಯನು ನೆರೆದವ
ಗಿತ್ತೆ ಕೈವಲ್ಯವನು ರಕ್ಷಿಸು
ನಮ್ಮನವರತ

ಇಂತಹ ಅನುಮಾನ, ಸಂದೇಹಗಳ ಹಿಂದೆಯೇ ಅವರಿಗೆ ಮಾನವನ ಅರಿವಿನ

( 25ನೇ ಪುಟ ನೋಡಿ )

ತಮಿಳುನಾಡಿನಲ್ಲಿ ಕುರಿಂಜ, ಮುಲ್ಲೈ, ಮರುದಂ, ನೆಥಾಲೆ ಎಂಬ ವಿಭಾಗಗಳಿದ್ದುವು. ಇಲ್ಲಿ ವಾಸವಾಗಿದ್ದ ಜನರು ತಮ್ಮ ತಮ್ಮ ಸಾಮಾಜಿಕ ಜೀವನ ದರ್ಜೆಗೆ ತಕ್ಕಂತೆ ವಾಸಿಸುತ್ತಿದ್ದರು. ಕೆಲವು ಐಶ್ವರ್ಯವಂತರಾಗಿಯೂ ನಾಯಕರಾಗಿಯೂ ಇದ್ದರು. ಇವರಲ್ಲಿ ಅಂದಣರ್, ಅರಸರ್, ವಣಿಕರ್ ಮತ್ತು ವೆಲ್ಲಾಲಸ್ ಎಂಬ ನಾಲ್ಕು ಮತಗಳಿದ್ದುವು. ವೇದದಲ್ಲಿ ನಿರೂಪಿತವಾದ ನಾಲ್ಕು ವರ್ಣಗಳನ್ನು ಇವು ಹೋಲುತ್ತಿದ್ದವು. ಹಾಗೆಯೇ ಪಣನ್, ಪರಯನ್, ಕದಯನ್, ಕುಡಿಯನ್ ಎಂಬ ನಾಲ್ಕು ಅಂತ್ಯಜಮತಗಳೂ ಇದ್ದವು. ಇವು ಇಂದಿನ ಹರಿಜನ ಗುಂಪಿಗೆ ಸರಿಸಮಾನವಾಗಿದ್ದವು.

ಪಣರು ಸ್ವಭಾವತಃ ಸಂಗೀತ ಪ್ರಿಯರು. ಹುಟ್ಟಿನಿಂದಲೇ ಅವರಿಗೆ ಸಂಗೀತಕಲೆ ಸ್ವಭಾವವಾಗಿದ್ದಿತು. ಅವರನ್ನು ಅಂತ್ಯಜರೆಂದು ಪರಿಗಣಿಸಿದ್ದರೂ ಅವರ ಕಲಾನೈಪುಣ್ಯ ಪ್ರದರ್ಶನಕ್ಕೆ ಅಡ್ಡಿ ಇರಲಿಲ್ಲ. ರಾಜರ, ಪಾಳೆಯಗಾರರ, ಶ್ರೀಮಂತರ ಮುಂದೆ ಅವರು ಹೋಗಿ ತಮ್ಮ ಸಂಗೀತ ಕಲೆಯನ್ನು ಪ್ರದರ್ಶನಮಾಡುತ್ತಿದ್ದರು. ಸ್ತ್ರೀಯರೂ ಕೂಡ ನೃತ್ಯಕಲೆಯಲ್ಲಿ ಬಹು ಚತುರರಾಗಿದ್ದರು. ಹೀಗೆ ಪಣರು ಶತಮಾನಗಳ ಕಾಲ ಸಂಗೀತ, ನೃತ್ಯಕಲೆಗಳಲ್ಲಿ ಹೆಸರುಗಳಿಸಿದ್ದರು, ಇವರು ಪರವಾಣಿನಿ ಎಂಬ ಸಂಗೀತವಾದ್ಯವನ್ನು ಉಪಯೋಗಿಸುತ್ತಿದ್ದರು.

ತಿರುಚನಾಪಳ್ಳಿ ವಿಸ್ತರಣಕ್ಕೆ ಸೇರಿದ ಉರೈಯೂರ್ ಎಂಬ ಸ್ಥಳದಲ್ಲಿ ಪಣನೊಬ್ಬನು ವಾಸನಾಗಿದ್ದನು. ವ್ಯವಸಾಯ ಅವನ ವೃತ್ತಿಯಾಗಿದ್ದಿತು. ಉಷಃಕಾಲದಲ್ಲಿ ಅವನು ಎದ್ದು ಗದ್ದೆಗೆ ಹೋದಾಗ ಆಗ ತಾನೆ ಹುಟ್ಟಿದ ಮಗುವೊಂದು ಬತ್ತದ ರಾಶಿಯ ಮೇಲೆ ಮಲಗಿದ್ದಿತು. ದರಿದ್ರನು ಧನವನ್ನು ಕಂಡಂತೆ, ಅವನು ಸಂತೋಷದಿಂದ ಮಗುವನ್ನು ಎತ್ತಿಕೊಂಡು ಮುದ್ದಾಡಿ ಮಕ್ಕಳಿಲ್ಲದ ತನ್ನ ಪತ್ನಿಯ ಕೈಗೆ ಕೊಟ್ಟನು. ಅವಳು ಅದನ್ನು ಮುದ್ದಾಡಿದಾಗ ಅವಳಲ್ಲಿ ತಾಯ್ತನವು ಅಂಕುರಿಸಿತು. ಆದರೆ ಮಗುವು ಸ್ತನ್ಯಪಾನಮಾಡಲಿಲ್ಲ. ದಂಪತಿಗಳು ಮಗುವಿಗೆ ಹಸುವಿನ ಹಾಲು ಕುಡಿಸಿ, ಬೆಳೆಸಿದರು. ಮಗುವಿಗೆ ಪಾಣನೆಂದೇ ನಾಮಕರಣ ಮಾಡಿದರು. ಐದು ವರ್ಷವಾಗುವುದರೊಳಗೆ ಪಾಣನು 'ಯಾಷ್' ಸಂಗೀತವಾದ್ಯ ಅಭ್ಯಾಸಕ್ಕೆ ಪ್ರಾರಂಭಿಸಿದನು. ಹನ್ನೆರಡು ವರ್ಷ ತುಂಬುವದೊರೊಳಗೆ, ಸಂಗೀತ, ವಾದ್ಯ ಕಲೆಯಲ್ಲಿ ನೈಪುಣ್ಯ ಪಡೆದನು. ಹದಿನಾರು ವರ್ಷದೊಳಗೆ ತಾನೇ ಸ್ವತಃ ಹಾಡುಗಳನ್ನು ಕವನಮಾಡಿ ಹಾಡುವ ಶಕ್ತಿ ಹೊಂದಿದನು. ಇವೆಲ್ಲವೂ ಅವನಿಗೆ ದೈವದತ್ತವಾಗಿ ಬಂದಂತೆ ಇದ್ದಿತು.

# ತಿರುಪ್ಪಾಣಾಳ್ವಾರ್

ಬಾಲಕನ ಪ್ರಶಸ್ತವಾದ ನಡೆನುಡಿ ಅವನ ಅನನ್ಯಭಕ್ತಿ ಎಲ್ಲವೂ ಅವನು ಸುಸಂಸ್ಕೃತನಾಗುವ ಕುರುಹುಗಳಾಗಿದ್ದವು. ಅವನು ತನ್ನ ಅಂತರ್ದೃಷ್ಟಿಯಿಂದ ಜೀವನದ ಮುಖ್ಯ ಉದ್ದೇಶ ತಿಳಿದವನಾಗಿದ್ದರೂ ಅದನ್ನು ಹೊರಪಡಿಸುತ್ತಿರಲಿಲ್ಲ. ಇಂತಹ ಉತ್ತಮ ಮಗನನ್ನು ಪೋಷಿಸುವ ಭಾಗ್ಯ ತಮ್ಮ ಪಾಲಿಗೆ ಬಂದುದನ್ನು ಕಂಡು ಆ ದಂಪತಿಗಳು ಹಿರಿ ಹಿಗ್ಗಿ, ಬಾಲಕನಿಗೆ ಉತ್ತಮ ಭವಿಷ್ಯವಿದೆಯೆಂದು ನಂಬಿದರು. ದೈವದತ್ತನಾದ ತನ್ನ ಕಲಾನೈಪುಣ್ಯವನ್ನು ಪರಮಾತ್ಮನ ಪಾದಕಮಲಗಳಲ್ಲಿ ಅರ್ಪಿಸಿ ಕೃತಾರ್ಥನಾಗಬೇಕೆಂದು ಪಾಣನು ಇಷ್ಟಪಟ್ಟನು. ಆದರೆ ಅವನಿಗೆ ದೇವಸ್ಥಾನ ಪ್ರವೇಶಕ್ಕೆ ಸಾಮಾಜಿಕ ಅಡ್ಡಿ ಇದ್ದುದನ್ನು ಅವನು ಮನಗಂಡಿದ್ದನು. ಜನರಿಗೆ ವಿರೋಧವಾದುದನ್ನು ತಾನು ಮಾಡಲು ಅವನು ಸಿದ್ಧವಿರಲಿಲ್ಲ. ಆದರೆ ಅಂತರಂಗದಲ್ಲಿ ಪರಮಾತ್ಮ ಸಂಬಂಧಪಡೆದ ಸಾಧುಗಳು ಇವೊಂದನ್ನು ಗಮನಿಸುವುದಿಲ್ಲ.

## ಶ್ರೀ ಡಿ. ಕೃಷ್ಣ ಅಯ್ಯಂಗಾರ್

ಕಾವೇರೀನದಿಯ ಮರಳು ದಿಬ್ಬದಮೇಲೆ, ರಂಗನಾಥಸ್ವಾಮಿಯ ದೇವಸ್ಥಾನಕ್ಕೆ ಎದುರಾಗಿ ಕುಳಿತು, ಪಾಣನು ನಿತ್ಯವೂ ತನ್ನ ಸಂಗೀತಸೇವಾ ಕೈಂಕರ್ಯವನ್ನು ಸ್ವೀಕರಿಸಬೇಕೆಂದು ದೀರ್ಘಕಾಲ ಹಾಡುತ್ತಿದ್ದನು. ತನ್ನ ಇಂಪಾದ ಧ್ವನಿಯನ್ನು ವಾದ್ಯದ ಧ್ವನಿಯೊಡನೆ ಸೇರಿಸಿ ಹಾಡುತ್ತಿದ್ದರೆ, ಅವೆರಡೂ ಸೊಗಸಾಗಿ ಮಿಳಿತವಾಗಿದ್ದವು, ನದಿಯ ಮಧ್ಯೆ ಕುಳಿತು, ಬಹುಕಾಲ ಪರಮಾತ್ಮನ ಸ್ತೋತ್ರರೂಪ ಹಾಡುಗಳನ್ನು ಕವನಮಾಡಿ ಹಾಡುತ್ತಿದ್ದನು.

ಪರಮಾತ್ಮರೂಪಿಯಾದ ರಂಗನಾಥನು, ತನ್ನ ಭಕ್ತನೊಬ್ಬನು ತನ್ನನ್ನು ಸ್ತೋತ್ರಮಾಡುತ್ತಿದ್ದರೆ, ಕೇಳದಿರುವನೇ ? ಸುಪ್ರಭಾತ, ಸ್ತೋತ್ರ, ಪದ್ಯಪಠಣ—ಇವೆಲ್ಲವೂ ನಿತ್ಯವೂ ನಡೆಯುತ್ತಿತ್ತು. ಇಂತಹ ಸಂಗೀತರಸ ಭಾವಾತಿರೇಕವು ಭಾವಪ್ರದರ್ಶಕವಾಗಿದ್ದುದಲ್ಲದೆ, ಅಲ್ಲಿಗೆ ಬರುವ ಜನರು ಮೈಮರೆಯುವಂತೆ ಮಾಡುತ್ತಿತ್ತು. ಹೀಗೆ ದೈವದತ್ತವಾದ ಸಂಗಿತವನ್ನು ಕೇಳಿ ಪರಮಾತ್ಮನು ಪ್ರೀತನಾದುದಲ್ಲದೆ, ಹಾಗೆ ಹಾಡಿದ ಭಕ್ತನನ್ನು ಅನುಗ್ರಹಿಸಬೇಕೆಂದು ಸಂಕಲ್ಪಮಾಡಿದನು.

ಲೋಕಸಾರಂಗರು ರಂಗನಾಥ ದೇವಾಲಯದಲ್ಲಿ ಕೈಂಕರ್ಯಪರರು, ಪಂಡಿತರು, ಪರಮಾತ್ಮನ ಅಭಿಷೇಕಕ್ಕೆ ನಿತ್ಯವೂ ನದಿಯಿಂದ ತೀರ್ಥ ತರುತ್ತಿದ್ದರು, ನದಿಗೆ ಹೋಗಿಬರುವಾಗ, ಸಂಗೀತಗಾರನೂ, ಕವಿಯೂ, ವಾದ್ಯಗಾರನೂ, ಪರಮಾತ್ಮ ಭಕ್ತನೂ ಆದ ತಿರುಪ್ಪಾಣನು ಹಾಡುತ್ತಿದ್ದ ಸ್ತೋತ್ರಗಳನ್ನು ಕೇಳುತ್ತಿದ್ದರು. ಒಂದು ದಿನ ತಿರುಪ್ಪಾಣನು ಹಾಡುತ್ತಿದ್ದ ಸ್ವರ್ಗೀಯ ಸಂಗೀತದಿಂದ ಪರಮಾತ್ಮನು ಪ್ರಸನ್ನನಾಗಿ, ಆ ಭಕ್ತನನ್ನು ತಮ್ಮ ಬಳಿಗೆ ಕರೆತರುವಂತೆ ಸ್ವಾಮಿಯು ಲೋಕಸಾರಂಗರಿಗೆ ಹೇಳಿದಂತಾಯಿತು.

ತಿರುಪ್ಪಾಣನು ಒಂದುದಿನ ನಿತ್ಯದಂತೆ ಧ್ಯಾನಪರವಶನಾಗಿ ನದಿಯ ಮಧ್ಯೆ ಬಾಹ್ಯ ಪ್ರಪಂಚದ ಅರಿವೇ ಇಲ್ಲದೆ ಹಾಡುತ್ತಿದ್ದನು. ಅವನ ಸಂಗೀತದ ಸೊಗಸು, ನದಿಯ ನೀರಿನಲ್ಲಿ, ದಡದ ಗಿಡಮರಗಳಲ್ಲಿ ಮರದಮೇಲಿನ ಪಕ್ಷಿಗಳಲ್ಲಿ ಪ್ರತಿಧ್ವನಿಗೊಡುವಂತೆ ವ್ಯಾಪಿಸಿತ್ತು. ಗಾನಪ್ರಿಯನಾದ ಪರಮಾತ್ಮನ ಪಾದಕಮಲಗಳಲ್ಲಿ ಭಕ್ತನ ಮನಸ್ಸು ನಾಟಿತ್ತು. ಭಕ್ತನು ಹಾಡಿದ ಸಂಗೀತದ ಪದ್ಯಗಳಲ್ಲಿ ಪರಮಾತ್ಮನ ಸ್ವರೂಪವು ಪಾರಮಾರ್ಥಿಕವಾಗಿ ಪ್ರಕಾಶಬಿಂಬಿತವಾಯಿತು. ಭಕ್ತನಿಗೆ ತನ್ನ ಪರಿಸ್ಥಿತಿಯ ಅರಿವಿತ್ತು. ಆದರೂ ಕರುಣಾಸಾಗರನೂ, ಕೃಪಾಶಾಲಿಯೂ, ಅನುಗ್ರಹಪರನೂ ಆದ ಸ್ವಾಮಿಯನ್ನು ಸಂಗೀತದಮೂಲಕ ಪ್ರಾರ್ಥಿಸಿ ಅವನ ಸಾನ್ನಿಧ್ಯ ಪಡೆಯಬೇಕೆಂದು ತಿರುಪ್ಪಾಣನು ಧೈರ್ಯಮಾಡಿದನು. ಸ್ವಾಮಿಯೂ ಕೂಡ ಭಕ್ತನ ಮೊರೆಯನ್ನು ಅಂಗೀಕರಿಸಿ ತನ್ನ ಬಳಿಗೆ ಭಕ್ತನನ್ನು ಕರೆತರಲು ಲೋಕ ಸಾರಂಗರಿಗೆ ಅಪ್ಪಣೆಮಾಡಿದ್ದನು.

ಲೋಕಸಾರಂಗರು ತಿರುಪ್ಪಾಣನ ಬಳಿಗೆ ಬಂದು ನಮಸ್ಕರಿಸಿ, ಪರಮಾತ್ಮನ ಅಪ್ಪಣೆ ತಿಳಿಸಿದಾಗ, ಅವನಿಗೆ ಆಶ್ಚರ್ಯವೂ ಭಯವೂ ಆಯಿತು. 'ಸ್ವಾಮಿ, ಲೋಕಸಾರಂಗ ಮುನಿಗಳೇ ! ರಂಗನಾಥ ಸ್ವಾಮಿಯು ಸರ್ವಜ್ಞನು, ಸರ್ವ ಸ್ವತಂತ್ರನು ಸರ್ವವ್ಯಾಪಕನು, ಕೃಪಾಶಾಲಿಯು, ನಾನು ಈ ಅಪವಿತ್ರದೇಹದಿಂದ, ಅಂತ್ಯಜನಾಗಿ ಹೇಗೆ ತಾನೆ ದೇವಸ್ಥಾನವನ್ನು ಪ್ರವೇಶಮಾಡಿ ಅವನ

# ತಿರುಮಲೆ
## ಶ್ರೀ ವೆಂಕಟೇಶ್ವರಸ್ವಾಮಿ ಅರ್ಚನಾ ಯೋಜನೆ

ಭಕ್ತರು ತಮ್ಮ ಇಷ್ಟದೈವವಾದ ಶ್ರೀ ವೆಂಕಟೇಶ್ವರಸ್ವಾಮಿಯನ್ನು ಅರ್ಚಿಸಲು ಅನುಕೂಲವಾಗುವಂತೆ ತಿರುಮಲೆ ತಿರುಪತಿ ದೇವಸ್ಥಾನದವರು ಹೊಸದಾಗಿ ಬಾಲಾಜೀ ಅರ್ಚನಾ ಯೋಜನೆಯನ್ನು ಆರಂಭಿಸಿದ್ದಾರೆ.

### ಈ ಯೋಜನೆಯಲ್ಲಿ ಸದಸ್ಯರಾಗುವುದು ಹೇಗೆ?

ನೀವು ಮಾಡಬೇಕಾಗಿರುವುದೆಂದರೆ ಇಂಡಿಯನ್ ಓವರ್‌ಸೀಸ್ ಬ್ಯಾಂಕ್ ಮೂಲಕ ತಿ. ತಿ. ದೇ. ಗಳಿಗೆ ರೂ 5586–00 ಸಲ್ಲಿಸುವುದು. ಇದರ ಪ್ರತಿಫಲವಾಗಿ ಹತ್ತು ವರ್ಷಗಳ ಕಾಲ ವರ್ಷಕ್ಕೊಮ್ಮೆ ನೀವು ಬಯಸಿದ ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಅರ್ಚನೆ ಮಾಡುವ ಮಹದ್ಭಾಗ್ಯ ನಿಮ್ಮದಾಗುತ್ತದೆ.

ನೀವು ಸಲ್ಲಿಸಿದ ಹಣ ಹತ್ತು ವರ್ಷಗಳಲ್ಲಿ 15000 ರೂ ಗಳಾಗಿ ಶ್ರೀ ವೆಂಕಟೇಶ್ವರಸ್ವಾಮಿಗೆ ಸೇರುವುದು. ಹಾಗಾಗಿ ಶ್ರೀ ವೆಂಕಟೇಶ್ವರ ಸ್ವಾಮಿಗೆ ಈ ಮೊತ್ತವನ್ನು ಅರ್ಪಿಸಿದ ತೃಪ್ತಿಯೂ ನಿಮಗೆ ದೊರೆಯುತ್ತದೆ.

### ಸೌಲಭ್ಯಗಳು :

ಅರ್ಚನೆಯ ದಿನದಂದು ದಾನಿಗಳಿಗೆ ತಿರುಮಲೆಯಲ್ಲಿ ವಸತಿ ಸೌಕರ್ಯ ಕಲ್ಪಿಸಲಾಗುತ್ತದೆ. ದಂಪತಿಗಳು ಅರ್ಚನ ಸೇವೆಯಲ್ಲಿ ಪಾಲುಗೊಳ್ಳಬಹುದು. ಕುಟುಂಬದ ಮೂವರಿಗೆ ಸುಪ್ರಭಾತದರ್ಶನ, ಪ್ರತ್ಯೇಕ ದರ್ಶನವುಂಟು. ಜೊತೆಗೇ ಉತ್ತರೀಯ ಅಥವಾ ಕುಪ್ಪುಸದ ಕಣ, ಪ್ರಸಾದಗಳುಂಟು.

**ಕಾರ್ಯನಿರ್ವಹಣಾಧಿಕಾರಿ**

ತಿ. ತಿ. ದೇ.

ಸಾನ್ನಿಧ್ಯಕ್ಕೆ ಬರಲಿ. ನನಗೆ ಧೈರ್ಯ ಸಾಲದಲ್ಲಾ! ನನ್ನ ಮನಸ್ಸೆಲ್ಲಾ ಅವನಲ್ಲಿ ನೆಲೆಸಿದೆ. ಆದರೆ ಮಾನವಜೀವನ-ಪರಮಾತ್ಮನ ಅಪ್ಪಣೆ–ಎರಡೂ ಸಮಸ್ಯೆಯಾಗಿ ನನ್ನ ಮುಂದೆ ನಿಂತಿವೆ. ಮುನಿಗಳೇ! ಈಗ್ಗೆ ಸ್ವಲ್ಪಮುಂಚೆ ನೀವು ಬರುವುದಕ್ಕೆ ಮೊದಲು, ಕೆಲವು ಮಂದಮತಿಗಳು ನನ್ನ ಕಡೆಗೆ ಕಲ್ಲು ಎಸೆಯುತ್ತಿದ್ದರು. ನಾನು ಇಲ್ಲಿ ಕುಳಿತು ಪ್ರಾರ್ಥಿಸುವುದೂ ಅವರಿಗೆ ಬೇಡವಾಗಿದೆ ಏನೇನೋ ಹೇಳಿ ಕಲ್ಲು ಎಸೆದರು. ಆದರೆ ಅವೊಂದೂ ನನಗೆ ತಾಕಲಿಲ್ಲ. ಪರಮಾತ್ಮನ ಕೃಪೆಯೇ ನನಗೆ ರಕ್ಷಾಕವಚ. ಸಾಧು ನನ್ನೊಡನೆ ಬಂದರೆ, ಆ ತಿಳಿಗೇಡಿಗಳು ನಿಮಗೆ ತೊಂದರೆ ಕೊಡಬಹುದಲ್ಲ. ಮಹಾತ್ಮರೂ, ವೇದಪಾರಂಗತರೂ, ಶಾಸ್ತ್ರ ಪ್ರಬಂಧ ನಿಪುಣರೂ ಆದವರು ರಂಗನಾಥಸ್ವಾಮಿಯ ದರ್ಶನಕ್ಕಾಗಿ ಸತತಬರುತ್ತಿರುವಾಗ, ನಾನು ಈ ಅಶುದ್ಧ, ಅಪವಿತ್ರದೇಹದಿಂದ ಹೇಗೆತಾನೆ ಬರಲಿ? ಹೇ! ರಂಗನಾಥಾ! ನನ್ನ ಸರ್ವಸ್ವಾಮಿಯೇ, ನಿನ್ನ ದಿವ್ಯಕರ ಅಪ್ಪಣೆಯೂ, ಅನುಗ್ರಹವೂ ನನ್ನ ಪಾಲಿಗೆ ಬಂದಿರುವಾಗ ನಾನೇನು ಮಾಡಲಿ? ನಿನ್ನ ಇಷ್ಟ ನೆರವೇರಲಿ ಸ್ವಾಮಿ', ಎಂದು ದೇವಸ್ಥಾನದಕಡೆಗೆ ದೀರ್ಘದಂಡ ನಮಸ್ಕಾರ ಮಾಡಿದನು.

ಲೋಕಸಾರಂಗರು 'ಸಾಧುವರೇಣ್ಯ! ನೀವು ಹೇಳುವಜಾತಿ ಹುಟ್ಟು ಎಲ್ಲವೂ ಸಾಮಾನ್ಯ ಮಾನವರಿಗೆ ಸಂಬಂಧಿಸಿದ್ದು. ಸರ್ವಜ್ಞನಾದ ಸ್ವಾಮಿಯು ನಿಮ್ಮನ್ನು ಭಕ್ತನೆಂದು ತಿಳಿದಿದ್ದಾನೆ. ಭಗವದ್ಭಕ್ತರಿಗೆ ಜಾತಿ ಕುಲ ನಿರ್ಬಂಧವಿಲ್ಲ. ನಿಮ್ಮನ್ನು ಕರೆತರುವಂತೆ ಸ್ವಾಮಿಯ ಅಪ್ಪಣೆಯಾಗಿದೆ. ನಿಮಗೆ ಅದನ್ನು ತಿಳಿಸುವುದು ನನ್ನ ಕರ್ತವ್ಯ. ಸಂತರೇ! ನನ್ನದು ಅಪೂರ್ಣಜ್ಞಾನ. ನೀವು ಕಾವೇರೀನದಿ ಮಧ್ಯೆ ಕುಳಿತು ಅನನ್ಯಭಕ್ತಿಯಿಂದ ಪರಮಾತ್ಮನನ್ನು ಸ್ತೋತ್ರ ಮಾಡಬೇಕೆಂದು ಸ್ವಾಮಿಯು ನಿಮಗೆ ಪ್ರೇರೇಪಣೆ ಮಾಡಲಿಲ್ಲವೇ? ನಿಮ್ಮ ಪ್ರಾರ್ಥನೆಯಿಂದ ಪರಮಾತ್ಮ ಪ್ರೀತನಾಗಿದ್ದಾನೆ. ಬ್ರಾಹ್ಮಣನೆನ್ನಿಸಿಕೊಂಡ ನನ್ನನ್ನು ನಿಮ್ಮ ಬಳಿಗೆ ಕರೆತರುವಂತೆ ಕಳುಹಿಸಿದ್ದಾನೆ, ಇಲ್ಲದಿದ್ದರೆ, ನನಗೆ ಧೈರ್ಯಬರುತ್ತಿತ್ತೇ? ನಾನು ಸಾಮಾಜಿಕನ್ಯಾಯ ಮೀರಿ, ಸ್ವಾಮಿಯ ಅಪ್ಪಣೆ ಪಾಲಿಸುವುದಕ್ಕಾಗಿ ನಿಮ್ಮ ಬಳಿ ಬರಲಿಲ್ಲವೇ? ಪರಮಾತ್ಮನ ಅಪ್ಪಣೆ ಮೀರಲು ಯಾರಿಗೂ ಸಾಧ್ಯವಿಲ್ಲ. ಸಾಧುಗಳೇ! ದೇವಸ್ಥಾನದಲ್ಲಿ ಪಾದವಿಡಬೇಕಲ್ಲಾ, ಎಂಬ ಶಂಕೆಗೆ ಕಾರಣವೇ ಇಲ್ಲ. ನಿಮ್ಮನ್ನು ನನ್ನ ಭುಜದ ಮೇಲೆ ಕೂರಿಸಿಕೊಂಡು ಬರಬೇಕೆಂದು ಸ್ವಾಮಿಯ ಅಪ್ಪಣೆ ಆಗಿದೆ. ಇಂತಹ ಅವನ ದಿವ್ಯತಮ

ವಾದ ಅಪೇಕ್ಷೆಯನ್ನು ಪಾಲಿಸುವುದರಿಂದ ನಾನು ರಂಗನಾಥಸ್ವಾಮಿಯ ಅನುಗ್ರಹಕ್ಕೆ ಪಾತ್ರ ನಾಗುವಸುಯೋಗ ದೊರೆತಿದೆ,' ಎಂದು ಹೇಳಿ, ಲೋಕಸಾರಂಗರು ತಿರುಪ್ಪಾಣರನ್ನು ತಮ್ಮ ಹೆಗಲಮೇಲೆ ಕೂರಿಸಿಕೊಂಡು ದೇವಸ್ಥಾನದ ಕಡೆ ಹೊರಟರು. ಗರ್ಭಗುಡಿ ಬಳಿಗೆಬಂದು ಭಕ್ತನನ್ನು ಸ್ವಾಮಿಯ ಮುಂದೆ ನಿಲ್ಲಿಸಿದರು

ಕಿರೀಟ ಕೇಯೂರಕ ರತ್ನಕುಂಡಲಂ
ಪ್ರಲಂಬ ಮುಕ್ತಾಮಣಿಹಾರ ಭೂಷಿತಮ್ ।
ವಿಶಾಲ ವಕ್ಷಸ್ಥಲ ಶೋಭಿ ಕೌಸ್ತುಭಂ
ಶ್ರಿಯಾ ಚ ದೇವ್ಯಾಽಧ್ಯುಷಿತೋರು ವಕ್ಷಸಮ್॥

ಪ್ರಶಸ್ತ ಚಾಮೀಕರ ಚಾರುವಾಸಸಂ
ಸುಮೇಖಲಂ ನೂಪುರ ಶೋಭಿತಾಂಘ್ರಿಕಮ್।
ಸುಮರ್ಧನೀಜಾತ ಮೃಣಾಲ ಕೋಮಲಂ
ದಧಾನಮರ್ಕಚ್ಛವಿ ಯಜ್ಞ ಸೂತ್ರಕಮ್ ॥

ಭುಜೋಪಧಾನಂ ಪ್ರಸೃತಾನ್ಯ ಹಸ್ತಂ
ನಿಕುಂಚಿತೋತ್ತಾನಿತ ಪಾದಯುಗ್ಮಮ್ ।
ಸುದೀರ್ಘ ಮುದ್ಬಾಹುಮುದಗ್ರುವೇಷಂ
ಭುಜಾಂಗಕಲ್ಪಂ ಪುರುಷಂ ದದರ್ಶ ॥

ಹೀಗೆ ಸರ್ವಾಭರಣಭೂಷಿತನಾದ, ಸರ್ವಾವಯವ ಸೌಂದರ್ಯಯುಕ್ತನಾದ, ಪರಮಾತ್ಮನ ದರ್ಶನಪಡೆದು ತೃಪ್ತರಾಗಿ, ಅದರಿಂದ ಉಂಟಾದ ಸ್ವಾನುಭವವನ್ನು ಹತ್ತು ತಮಿಳು ಪದ್ಯಗಳಲ್ಲಿ ಹಾಡಿದ್ದಾರೆ. ಇದಕ್ಕೆ 'ಅಮಲನಾದಿಪಿರಾನ್' ಎಂದು ಹೆಸರು. ಪರಮ ಭಕ್ತನೊಬ್ಬನಿಗೆ ದಿವ್ಯತಮವಾದ ಪರಮಾತ್ಮದರ್ಶನವಾದಾಗ ಉಂಟಾಗುವ ಅನುಭವವನ್ನು ಈ ಪ್ರಬಂಧವು ತಿಳಿಸುತ್ತದೆ. ಇದನ್ನು ಯಾರು ಭಕ್ತಿಯಿಂದ ಪಠಿಸುವರೋ ಅವರಿಗೆ ಪರಮಾತ್ಮದರ್ಶನವಾಗಿ, ಪರಮಭಕ್ತರಾಗುವುದರಲ್ಲಿ ಸಂದೇಹವಿಲ್ಲ.

## ಅಮಲನಾದಿಪಿರಾನ್

ಆಪಾದಚೂಡಮನುಭೂಯ
ಹರಿಂ ಶಯಾನಂ
ಮಧ್ಯೇ ಕವೇರ ದುಹಿತು
ರ್ಮುದಿತಾಂತರಾತ್ಮಾ ।
ಅದ್ರಷ್ಟೃತಾಂ ನಯನಯೋ
ರ್ವಿಷಯಾಂತರಾಣಾಂ
ಯೋ ನಿಶ್ಚಿಕಾಯ ಮನವೈ
ಮುನಿವಾಹನಂ ತಮ್ ॥

ಕಾವೇರೀಮಧ್ಯದಲ್ಲಿ ಮಲಗಿರುವ ರಂಗನಾಥ ಸ್ವಾಮಿಯನ್ನು ಆಪಾದಮಸ್ತಕವಾಗಿ ದರ್ಶನ ಮಾಡಿ, ಅನುಭವಿಸಿ ಸಂತುಷ್ಟರಾಗಿ, ಬೇರೆ ಇನ್ನೊಂದು ವಸ್ತುವನ್ನು ಕಣ್ಣು ಕಾಣದು. ನೋಡಲಾರೆನೆಂದು ನಿಶ್ಚಯಿಸಿದ ಮುನಿವಾಹನರೆಂಬ ತಿರುಪ್ಪಾಣಾಳ್ವಾರನ್ನು ಧ್ಯಾನಿಸುತ್ತೇನೆ.

ಅಮಲನಾದಿಪಿರಾನ್ ಅಡಿಯಾರ್ಕ್ಕೆನ್ನೈ
ಯಾಳ್ಪಡುತ್ತ
ವಿಮಲನ್ ವಿಣ್ಣವರ್ ಕೋನ್ ವಿರೈಯಾರ್
ಪೊೞಿಲ್ ವೇಂಗಡವನ್
ನಿಮಲನ್ ನಿನ್ಮಲನ್ ನೀದಿವಾನವನ್ ನೀಳ್ಮದಿಳ್
ರಂಗತ್ತಮ್ಮಾನ್ ತಿರು
ಕ್ಕಮಲಪಾದಂ ವನ್ದೆನ್ ಕಣ್ಣಿನುಳ್ಳನ
ವೊಕ್ಕಿನ್ರದೇ ॥

ನಿತ್ಯ ಪರಿಶುದ್ಧನಾಗಿಯೂ ತನ್ನ ಭಕ್ತರಿಗೆ ನನ್ನನ್ನು ದಾಸನನ್ನಾಗಿ ಮಾಡುವ ತೇಜೋನಿಧಿಯಾಗಿಯೂ, ದಿವ್ಯಪರಿಮಳಭರಿತವಾದ ಉದ್ಯಾನಗಳುಳ್ಳ ವೆಂಕಟಾದ್ರಿಯಲ್ಲಿ ವಾಸಮಾಡುವವ



ನಾಗಿಯೂ, ನಿತ್ಯನಿರ್ಮಲನಾಗಿಯೂ, ನ್ಯಾಯಶೀಲನಾಗಿ, ನಿತ್ಯಸೂರೀಶ್ವರನಾಗಿಯೂ, ಶ್ರೀರಂಗದಲ್ಲಿ ವಾಸಮಾಡುವವನಾಗಿಯೂ, ಇರುವ ಸರ್ವೇಶ್ವರನಾದ ಶ್ರೀರಂಗನಾಥನ ಪಾದಾರವಿಂದಗಳು ನನ್ನ ಕಣ್ಣುಗಳೊಳಗೆ ತಾನೇ ಬಂದು ಸ್ಥಿರವಾಗಿ ನಿಂತಿವೆ.

ಉವನ್ದ ಉಳ್ಳತ್ತನಾಯುಲಗ
ಮಳನ್ದಂಡಮುರ
ನಿವನ್ದ ನೀಳ್ಮುಡಿಯನನ್ರು ನೇರ್ನ್ದ
ನಿಶಾಚರರೈ
ಕ್ಕವರ್ನ್ದ ವೆಂಕಣೈಕ್ಕಾಕುತ್ತನ್ ಕಡಿಯಾರ್
ಪೊೞಿಲರಂಗತಮ್ಮಾನ್ ಅರೈ
ಚ್ಚಿವನ್ದ ವಾಡೈಯಿನ್ಮೇಲ್ ಶೆನ್ರದಾಮೆನ
ಶಿನ್ದೈಯೇ ॥ ೨ ॥

ನನ್ನನ್ನು ಪರಿಗ್ರಹಿಸಿ ಸಂತುಷ್ಟಚಿತ್ತನಾಗಿ ಲೋಕಗಳನ್ನೆಲ್ಲ ಅಳೆದು ಉನ್ನತ ಕಿರೀಟಧಾರಿಯಾಗಿ, ಜನಸ್ಥಾನದಲ್ಲಿ ರಾಕ್ಷಸರನ್ನೆಲ್ಲ ನಾಶಪಡಿಸಿದ ಕಾಕುತ್ಸ್ಥನಾಗಿ, ಸುಗಂಧ ವೃಕ್ಷಭರಿತವಾದ ಶ್ರೀರಂಗದಲ್ಲಿ ನಿತ್ಯವಾಗಿರುವ ಸ್ವಾಮಿಯ ಕಟಿಯಲ್ಲಿರುವ ದಿವ್ಯ ಪೀತಾಂಬರದಲ್ಲಿ ನನ್ನ ಮನಸ್ಸು ಹೋಗಿ ನಾಟಿದೆ. ಇದು ಆಶ್ಚರ್ಯವಲ್ಲವೇ?

ಮನ್ದಿ ಪಾಯ್ ವಡವೇಂಗಡ ಮಾಮಲೈ
ವಾನವರ್ಕಳ್
ಶನ್ದಿ ಶೆಯ್ಯ ನಿನ್ರಾನರಂಗತ್ತರವಿನಣೈಯಾನ್
ಅನ್ದಿ ಪೋಲ್ ನಿರತ್ತಾಡೈಯುಮದನ್ಮೇಲ
ಯನೈಪ್ಪಡೈತ್ತದೋರೆೞಿಲ್
ಉನ್ದಿ ಮೇಲದನ್ರೋ ಅಡಿಯೇ-
ನುಳ್ಳತ್ತಿನ್ನುಯಿರೇ ॥ ೩ ॥

ಕಪಿಗಳು ಕೊಂಬೆಯಿಂದ ಕೊಂಬೆಗೆ ಹಾರುತ್ತಿರುವ ಉದ್ಯಾನಗಳುಳ್ಳ ವೆಂಕಟಾದ್ರಿಯಲ್ಲಿ ನಿತ್ಯಸೂರಿಗಳಿಂದ ಸ್ವಾಮಿಯ ದಿವ್ಯಪೀತಾಂಬರದ ಮೇಲೆ ಪ್ರಕಾಶಿಸುವ ಚತುರ್ಮುಖನಿಗೆ ಉತ್ಪತ್ತಿಸ್ಥಾನವಾದ ನಾಭಿ ಕಮಲದ ಮೇಲೆ ನನ್ನ ಅಂತರಂಗವು ಹೋಗಿ ನಿಂತಿದೆ. (ಇಲ್ಲಿ ವೆಂಕಟನಾಥ ರಂಗನಾಥ ಇಬ್ಬರೂ ಒಂದೇ ಎಂದು ಆಳ್ವಾರರು ಹಾಡಿದ್ದಾರೆ.)

ಶದಿರಮಾಮದಿಳ್ ಶೂೞಿಲಂಗೈಕ್ಕಿರೈವನ್
ತಲೈಪ
ತ್ತುದಿರವೋಟ್ಟಿ ಓರ್ವೆಂಗಣೈಯು
ಯತ್ತವನೋದವಣ್ಣನ್
ಮದುರ ಮಾವಂಡುಪಾಡ ಮಾಮಯಿಲಾಡ
ರಂಗತ್ತಮ್ಮಾನ್ ತಿರುವಯಿ
ತ್ತುದರಬನ್ದನಮೆನ್ನುಳ್ಳತ್ತುಳ್
ನಿನ್ರುಲಾಕಿನ್ರದೇ ॥ ೪ ॥

ಮಹಾ ಪ್ರಾಕಾರದಿಂದ ಆವೃತವಾದ ಲಂಕಾಧೀಶನಾದ ರಾವಣನನ್ನು ಯುದ್ಧದಲ್ಲಿ ಸೋಲಿಸಿ ಒಂದೇಬಾಣದಿಂದ ಅವನ ಹತ್ತು ತಲೆಗಳನ್ನು ಕತ್ತರಿಸಿದ ಶ್ರೀರಂಗನಾಥನ ಉದರ ಬಂಧನವು ನನ್ನ ಮನಸ್ಸಿನಲ್ಲಿ ಸ್ಥಿರವಾಗಿ ನಿಂತು ಪ್ರಕಾಶಿಸುತ್ತಿದೆ.

ವಾರಮಾಯ ಪೞವಿನೈಪ್ಪಟ್ರರುತ್ತು ಎನ್ನೈತ್ತನ್
ಪಾರಮಾಕ್ಕಿ ವೈತ್ತಾನ್ ವೈತ್ತದನ್ರಿಯೆನ್ನುಳ್
ಪುಕುನ್ದಾನ್
ಕೋರ ಮಾದವಂಶೆಯ್ದನನ್ಕೊಲ್ ಅರಿಯೇನ್
ರಂಗತಮ್ಮಾನ್ ತಿರು
ವಾರ ಮಾರ್ಬದನ್ರೋ ಅಡಿಯೇನೈಯಾಳ
ಕ್ಕೊಂಡದೇ ॥ ೫ ॥

ಅನಾದಿಕಾಲದಿಂದ ಆರ್ಜಿತವಾದ ಮಹಾಪಾಪಗಳನ್ನು ನನ್ನ ಸ್ವಾಮಿಯು ನಿರ್ಮೂಲವಾಗಿ ಛೇದಿಸಿ

ನನ್ನನ್ನು ತನ್ನಲ್ಲಿ ಪ್ರೀತಿಮಾಡುವಂತೆ ಇಟ್ಟು, ತಾನೂ ನನ್ನ ಹೃದಯದಲ್ಲಿ ಪ್ರವೇಶಿಸಿದನು. ನಾನು ಯಾವ ತಪಸ್ಸು ಮಾಡಿ ಈ ಭಾಗ್ಯ ಪಡೆದನೋ ತಿಳಿಯದು. ಶ್ರೀರಂಗನಾಥನ ಮುಕ್ತಾಹಾರವುಳ್ಳ ವಕ್ಷಸ್ಥಲವು ನನ್ನ ಮನಸ್ಸನ್ನು ಆಕರ್ಷಿಸಿದೆ.

ತುಂಡವೆಣ್ ಪಿರೈಯರ್ ತುಯರ್ ತೀರ್ತ್ತವ
ಅಂಜಿರೈಯ
ವಂಡುವಾಳ್ ಪೊಳಿಲ್ ಶೂಳರಂಗನಗರ್-
ಮೇಯವಪ್ಪ
ಅಂಡರಂಡ ಬಹಿರಂಡತ್ತೊರು ಮಾನಿಲಮೇಳು
ಮಾಳ್‌ವರೈ ಮುತ್ತು
ಮುಂಡ ಕಂಡಂ ಕಣ್ಣೀರ್ ಅಡಿಯೇನೈ
ಯುಯ್ಯಕ್ಕೊಂಡದೇ ॥ ೬ ॥

ಚಂದ್ರಮೌಳಿಯಾದ ರುದ್ರನ ಪಾತಕವನ್ನು ಪರಿಹರಿಸಿದವನಾಗಿ, ರಮ್ಯೋದ್ಯಾನದಿಂದ ಕೂಡಿದ ಶ್ರೀರಂಗದಲ್ಲಿ ಶಯನಮಾಡಿರುವ ರಂಗನಾಥ ಸ್ವಾಮಿಯ, ಸಕಲಾಂಡಗಳನ್ನೂ ಮಹಾಪೃಥಿವಿಯನ್ನೂ ಸಪ್ತಕುಲಪರ್ವತಗಳನ್ನು ಭಕ್ಷಿಸಿದ ದಿವ್ಯ ಕಂಠವು ದಾಸಭೂತನಾದ ನನ್ನನ್ನು ವಶೀಕರಿಸಿ ಉಜ್ಜೀವಿಸುವಂತೆ ಮಾಡಿದೆ

ಕೈಯಿನಾರ್ ಶುರಿಶಂಗನಾಳಿಯರ್ ನೀಳ್
ವರೈಪೋಲ್
ಮೆಯ್ಯನಾರ್ ತುಳಪವಿರೈಯಾರ್ ಕಮಳ್
ನೀಳ್ ಮುಡಿ ಎಮ್
ಐಯನಾರಣಿಯ ರಂಗನಾರರವಿನಣೈಮಿಶೈ
ಮೇಯ ಮಾಯನಾರ್
ಶೆಯ್ಯ ವಾಯಯ್ಯೋ! ಎನ್ನೈಚ್ಚಿನ್ದೈ
ಕವರ್‌ನ್ದದುವೇ ॥ ೭ ॥

ರಮ್ಯವಾದ ಶಂಖಚಕ್ರಗಳನ್ನು ದಿವ್ಯ ಹಸ್ತಗಳಲ್ಲಿ ಧರಿಸಿ ಪರ್ವತ ಸದೃಶವಾದ ದಿವ್ಯಮಂಗಳ ವಿಗ್ರಹಯುಕ್ತನಾಗಿ ಪರಿಮಳಭರಿತವಾದ ತುಳಸೀ ಮಾಲೆಗಳಿಂದ ಅಲಂಕೃತನಾಗಿ, ಉನ್ನತ ಕಿರೀಟವುಳ್ಳವನಾಗಿ ನಮಗೆಲ್ಲ ತಂದೆಯಾಗಿ ಲೋಕಕ್ಕೆಲ್ಲ ಆಭರಣಸದೃಶವಾದ ಶ್ರೀರಂಗದಲ್ಲಿ ಶೇಷಶಾಯಿಯಾಗಿರುವ, ಮಾಯಾಚೇಷ್ಟಿತನಾದ ಪರಮಾತ್ಮನ ಬಿಂಬಾಧರವು ನನ್ನ ಮನಸ್ಸನ್ನು ಆಕರ್ಷಿಸಿದೆ.

ಪರಿಯನಾಕಿ ವನ್ದ ವವುಣನುಡಲ್
ಕೀಂಡವಮರರ್
ಕ್ಕರಿಯ ವಾದಿಪ್ಪಿರಾನರಂಗತ್ತಮರ್
ಮುಕತ್ತು
ಕರಿಯವಾಕಿಪ್ಪುಡೈಪರನ್ದು ಮಿಳಿರ್‌ನ್ದು
ಶೆವ್ವರಿಯೋಡಿ ನೀಂಡವ
ಪ್ಪೆರಿಯ ವಾಯ್‌ಕಣ್‌ಕಳೆನ್ನೈಪ್ಪೇದೈಮೈ
ಶೆಯ್‌ದವನೇ ॥ ೮ ॥

ವರಗಳಿಂದ ಬಲಿಷ್ಠನಾಗಿ (ಪ್ರಹ್ಲಾದನಿಗೆ ಹಿಂಸಕನಾದ) ಹಿರಣ್ಯಕಶಿಪುವನ್ನು ಸೀಳಿದವನಾಗಿ, ಬ್ರಹ್ಮಾದಿ ದೇವತೆಗಳಿಗೂ ದುರ್ಲಭನಾಗಿ, ಜಗತ್ಕಾರಣಭೂತನಾಗಿ, ಮಹೋಪಕಾರಕನಾದ ಸ್ವಾಮಿಯಾಗಿ, ಶ್ರೀರಂಗಶಾಯಿಯಾಗಿ, ನಿತ್ಯ ಪರಿಶುದ್ಧನಾಗಿರುವ ಸರ್ವೇಶ್ವರನಾದ ಶ್ರೀರಂಗನಾಥನ ವಿಶಾಲವಾದ ರಮ್ಯನೇತ್ರಗಳು ನನ್ನ ಹೃದಯವನ್ನು ಹೊಕ್ಕು ವಶೀಕರಿಸಿವೆ.

ಆಲಮಾ ಮರತ್ತಿ ನಿಲೈಮೇಲೊರು
ಬಾಲನಾಯ್
ಜ್ಞಾಲಮೇಳು ಮುಂಡಾನರಂಗತ್ತರ
ವಿನಣೈಯಾ
ಕೋಲಮಾಮಣಿಯಾರಮುಮ್
ಮುತ್ತುತ್ತಾಮುಂಮುಡಿವಿಲ್ಲದೋರೆಳಿಲ್
ನೀಲಮೇನಿಯಯ್ಯೋ ನಿರೈಕೊಂಡದೆ
ನೆಂಜಿನೈಯೇ ॥ ೯ ॥

ದೊಡ್ಡ ಆಲದಮರದ ಒಂದು ಎಲೆಯ ಮೇಲೆ ಶಿಶುವಾಗಿ ಮಲಗಿ ಸರ್ವಲೋಕಗಳನ್ನು ಭಕ್ಷಿಸಿದ ಶ್ರೀರಂಗನಾಥನ ರಮಣೀಯವಾದ ರತ್ನಾಹಾರವೂ, ಮುಕ್ತಾಹಾರವೂ, ನಿರವಧಿಕ ಸೌಂದರ್ಯವುಳ್ಳ ನೀಲವರ್ಣನಾದ ದಿವ್ಯಮಂಗಳ ವಿಗ್ರಹವೂ ನನ್ನ ಮನಸ್ಸನ್ನೆಲ್ಲಾ ಸಂಪೂರ್ಣವಾಗಿ ಆಕರ್ಷಿಸಿದೆ.

ಕೊಂಡಲ್ ವಣ್ಣನೈಕ್ಕೋವಲನಾಯ್,
ವೆಣ್ಣೈ
ಯುಂಡವಾಯನ್, ಎನ್ನುಳ್ಳಂ ಕವರ್‌ನ್ದಾನೈ
ಅಂಡರ್‌ಕೋನಣಿಯರಂಗನ್, ಎನ್ನಮುದನೈ
ಕ್ಕಂಡ ಕಣ್‌ಗಳ್ ಮತ್ತೊನ್ರಿನೈಕ್ಕಾಣಾವೇ
॥ ೧೦ ॥

ನೀಲಮೇಘಶ್ಯಾಮನಾಗಿ, ಗೋಪಾಲಕನಾಗಿ, ನವನೀತಭಕ್ಷಕನಾಗಿ, ನನ್ನಹೃದಯವನ್ನು ಅಪಹರಿಸಿದವನಾಗಿರುವ, ಅಂಡಾನ್ತರ್ವರ್ತಿಗಳಿಗೆಲ್ಲ ಸ್ವಾಮಿಯಾಗಿ, ಶ್ರೀರಂಗ ದಿವ್ಯಕ್ಷೇತ್ರದಲ್ಲಿ ಶೇಷಶಾಯಿಯಾಗಿರುವ ಅಮೃತಸ್ವರೂಪಿಯಾದ ಪರಮಾತ್ಮನನ್ನು ಮನದಣಿಯುವಂತೆ ಕಂಡ ನನ್ನ ಕಣ್ಣುಗಳು ಮತ್ತೊಂದು ವಸ್ತುವನ್ನು ನೋಡಲಾರವು.

ಹೀಗೆ ತಿರುಪ್ಪಾಣಾಳ್ವಾರರು ಶ್ರೀರಂಗನಾಥ ಸ್ವಾಮಿಯ ದಿವ್ಯಸೌಂದರ್ಯಾದಿಗಳನ್ನು ಆಪಾದಮಸ್ತಕವಾಗಿ ವರ್ಣಿಸಿ, ಪರಮಾತ್ಮಾನುಗ್ರಹವು ಅನ್ಯಾದೃಶವೆಂದು ಸ್ಪಷ್ಟಪಡಿಸಿದ್ದಾರೆ. 'ಭಕ್ತಿಕ್ರೀತೋ ಜನಾರ್ದನ'ಎಂಬಂತೆ ಜನ್ಮತಃ ಶ್ರೇಷ್ಠತೆಗಿಂತ ಗುಣತಃ ಶ್ರೇಷ್ಠವಾಗಿರುವುದು ಸ್ವಾಮಿಗೆ ಇಷ್ಟತಮ ಎಂಬ ತತ್ತ್ವವನ್ನು ಎತ್ತಿ ತೋರಿಸಲಾಗಿದೆ. ಪರಮಾತ್ಮನು ತನ್ನ ದಿವ್ಯರೂಪ ಸೌಂದರ್ಯಗಳನ್ನು ಭಕ್ತರಿಗಾಗಿ ಪ್ರಕಾಶಪಡಿಸಿ ಪರಮಾನಂದ ವುಂಟುಮಾಡುವನೆಂಬುದನ್ನು ಈ ಪ್ರಬಂಧವು ನಿರೂಪಿಸಿದೆ. ಪರಮಭಕ್ತರಾದ ತಿರುಪ್ಪಾಣಾಳ್ವಾರರು ಶ್ರೀರಂಗನಾಥನೆಂಬ ಅಮೃತರೂಪವನ್ನು ಕಂಡ ತಮ್ಮ ಕಣ್ಣುಗಳು ಬೇರಾವ ವಸ್ತುವನ್ನೂ ನೋಡುವುದಕ್ಕೆ ಇಷ್ಟಪಡುವುದಿಲ್ಲ ಎಂದು ಪ್ರಕಟಪಡಿಸಿದ್ದಾರೆ. ★

# ಗೃಹಲಕ್ಷ್ಮಿ

ಆದಿಕವಿ ವಾಲ್ಮೀಕಿ ರಚಿಸಿದ ರಾಮಾಯಣ ತರುವಾಯದ ಕವಿಗಳಿಗೆಲ್ಲ ಮಾರ್ಗದರ್ಶಿಯಾದಂತೆಯೇ ರಾಮಾಯಣದಲ್ಲಿನ ಧರ್ಮಸೂಕ್ಷ್ಮಗಳು ಬೇರೆಲ್ಲೂ ಕಂಡು ಬರವು. ರಾಮಾಯಣವನ್ನು ತಿಳಿಯದ ಭಾರತೀಯರಾರೂ ಇಲ್ಲವೆನ್ನಬಹುದಾದರೂ, ರಾಮಾಯಣದಲ್ಲಿನ ವಿಶೇಷ ಧರ್ಮಸೂಕ್ಷ್ಮಗಳನ್ನು ತಿಳಿದವರು ಬಹುಜನವಿಲ್ಲ. ಅಲ್ಲಿನ ಪಾತ್ರಗಳೆಲ್ಲ – ವಿಶೇಷವಾಗಿ ಸ್ತ್ರೀಪಾತ್ರಗಳು– ಧರ್ಮಸೂಕ್ಷ್ಮಗಳ ಬಗ್ಗೆ ಆಳವಾದ ಪರಿಜ್ಞಾನ ಪಡೆದವರಾಗಿದ್ದರು. ಸೀತೆಯಾಗಲೀ, ಸುಮಿತ್ರೆಯಾಗಲೀ, ತಾರೆ, ಕಡೆಗೆ ಮಂಡೋದರಿಯಾಗಲೀ ಶ್ರೀರಾಮನ ಮಹತ್ವವನ್ನು ಪುರುಷೋತ್ತಮತ್ವವನ್ನು ತಿಳಿದೇ ನಡೆದವರು. ಮಂಡೋದರಿಯು ಕಂಡ ಶ್ರೀರಾಮ ತತ್ತ್ವವನ್ನು ತುಸು ಪರಿಶೀಲಿಸುವ.

ಸ ತು ನಿಹತ ರಿಪು ಸ್ಥಿರ ಪ್ರತಿಜ್ಞ
ಸ್ವಜನ ಬಲಾಭಿವೃತೋ ರಣೇ ರರಾಜ
ರಘುಕುಲ ನೃಪನಂದನೋ
ಮಹೌಜಾಸ್ತ್ರಿ
ದಶಗಣೈರಭಿಸಂವೃತೋ ಯಥೇಂದ್ರಃ

–ರಾವಣನನ್ನು ಬ್ರಹ್ಮಾಸ್ತ್ರದಿಂದ ವಧಿಸಿದ ಶ್ರೀರಾಮನು ಶತ್ರುವನ್ನು ಜಯಿಸಿದವನಾಗಿ ಸ್ಥಿರವಾದ ಪ್ರತಿಜ್ಞೆಯವನಾಗಿ, ರಘುವಂಶದವರಿಗೆ ಸಂತಸದಾಯಕನಾಗಿ, ದೇವತೆಗಳ ಮಧ್ಯೆ ಇಂದ್ರನು ಶೋಭಿಸುವಂತೆ ರಣರಂಗದಲ್ಲಿ ತನ್ನ ಸೈನ್ಯದ ಮಧ್ಯೆ ಶೋಭಿಸಿದನು.

ವ್ಯಕ್ತ ಮೇಷ ಮಹಾಯೋಗೀ
ಪರಮಾತ್ಮಾ ಸನಾತನಃ
ಅನಾದಿಮಧ್ಯ ನಿಧನೋ
ಮಹತಃ ಪರಮೋ ಮಹಾನ್
ತಮಸಃ ಪರಮೋ ದಾತಾ
ಶಂಖ ಚಕ್ರ ಗದಾಧರಃ

ಶ್ರೀ ವಿ. ರಂಗಸ್ವಾಮಿಅಯ್ಯಂಗಾರ್

ಶ್ರೀವತ್ಸವಕ್ಷಾ ನಿತ್ಯಶ್ರೀ
ಅಜಯ್ಯಃ ಶಾಶ್ವತೋ ಧ್ರುವಃ

(ಯುದ್ಧ ರಂಗದಲ್ಲಿ ಬಿದ್ದಿದ್ದ ರಾವಣನನ್ನು ನೋಡಿ ಮಂಡೋದರಿ ಹೇಳುವ ವಾಕ್ಯಗಳಿಂದ ಶ್ರೀರಾಮನು ವಿಷ್ಣುವೇ ಎಂಬುದನ್ನು ವಾಲ್ಮೀಕಿ ನಿರೂಪಿಸಿದ್ದಾನೆ) ಈ ರಾಮನು ಹಿರಿದಾದ ಲೋಕ ಸಂರಕ್ಷಣೆಯ ಉದ್ದೇಶ ಹೊಂದಿದವನು. ಸರ್ವಜೀವಾತ್ಮರಿಗಿಂತ ಉತ್ಕೃಷ್ಟನಾದವನು. ಈತ ಎಲ್ಲ ಕಾಲದಲ್ಲೂ ಇರುವ ಜನ್ಮ, ವೃದ್ಧಿ, ವಿನಾಶಗಳಿಲ್ಲದವನು ಹಿರಿಯರಲ್ಲಿ ಹಿರಿಯನು. ಶಂಖ, ಚಕ್ರ, ಗದೆ, ಮೊದಲಾದ ಆಯುಧಗಳನ್ನು ಹೊಂದಿ ಎದೆಯಲ್ಲಿ ಶ್ರೀವತ್ಸವನ್ನು ಹೊಂದಿದವನು. (ಈತನ ಪುರುಷಕಾರ ಇಲ್ಲಿ ಹೇಳಲ್ಪಟ್ಟಿದೆ) ನಿತ್ಯವೂ ಅನಪಾಯಿನಿಯಾದ ಲಕ್ಷ್ಮಿಯನ್ನು ಹೊಂದಿದವನು ಎಂತಲೇ ಜಯಿಸಲಸಾಧ್ಯನಾದವನು. ಈತ ನಿತ್ಯನು. ಇದು ನಿಜ.

## ಮಂಡೋದರಿ

ಮಾನುಷಂ ವಪುರಾಸ್ಥಾಯ
ವಿಷ್ಣುಸ್ಸತ್ಯ ಪರಾಕ್ರಮಃ
ಸರ್ವೈಃ ಪರಿವೃತೋ ದೇವೈಃ
ವಾನರತ್ವ ಮುಪಾಗತೈಃ
ಸರ್ವಲೋಕೇಶ್ವರ ಸ್ಸಾಕ್ಷಾತ್
ಲೋಕಾನಾಂ ಹಿತ ಕಾಮ್ಯಯಾ
ಸರಾಕ್ಷಸ ಪರೀವಾರಂ
ಹತವಾಂಸ್ತ್ವಾಂ ಮಹದ್ಯುತಿ

ಸತ್ಯವಾದ ಪರಾಕ್ರಮ ಹೊಂದಿದವನೂ, ಸಕಲಲೋಕಗಳಿಗೆ ಈಶ್ವರನಾಗಿರುವವನೂ ತೇಜೋವಂತನೂ ಆದ ಮಹಾವಿಷ್ಣುವು ಮಾನವಾಕೃತಿಯನ್ನು ಧರಿಸಿ, ವಾನರ ದೇಹಗಳನ್ನು ಹೊಂದಿದ ಸಕಲದೇವತೆಗಳನ್ನು ಕೂಡಿಕೊಂಡು, ರಾಕ್ಷಸರಿಂದೊಡಗೂಡಿದ ನಿನ್ನನ್ನು ಸಂಹರಿಸಿದನು.

ಶುಭಕೃಚ್ಛುಭಮಾಪ್ನೋತಿ
ಪಾಪಕೃತ್ ಪಾಪಮಶ್ನುತೇ
ವಿಭೀಷಣಸ್ಸುಖಂ ಪ್ರಾಪ್ತ
ಸ್ತ್ವಂ ಪ್ರಾಪ್ತಃ ಪಾಪಮೀದೃಶಮ್

ಪುಣ್ಯಮಾಡಿದನು ಸುಖವನ್ನು ಹೊಂದುವನು ಪಾಪವನ್ನು ಮಾಡಿದವನು ದುಃಖ ಹೊಂದುವನು. ಓ ರಾವಣಾ! ವಿಭೀಷಣನು ಸುಖವಾಗಿದ್ದಾನೆ. ನೀನು ಇಂತಹ ದುಃಖ ಹೊಂದಿರುವೆ

ಪಿತಾ ದಾನವರಾಜೋ ಮೇ
ಭರ್ತಾ ಮೇ ರಾಕ್ಷಸೇಶ್ವರಃ
ಪುತ್ರೋ ಮೇ ಶಕ್ರ ನಿರ್ಜೇತಾ
ಇತ್ಯೇವಂ ಗರ್ವಿತಾ ಭೃಶಮ್

ನನ್ನ ತಂದೆ ದಾನವರಿಗೆ ರಾಜನಾದ ಮಯ. ನನ್ನ ಗಂಡ ರಾಕ್ಷಸರ ಪ್ರಭು ರಾವಣ. ನನ್ನ ಮಗ ಇಂದ್ರನನ್ನು ಗೆದ್ದವನೆಂದು ಗರ್ವ ಪಡುತ್ತಿದ್ದೆ

ಪ್ರವಾದ ಸ್ಸತ್ಯ ಏವಾಯಂ
ತ್ವಾಂ ಪ್ರತಿ ಪ್ರಾಯಶೋ ನೃಪ
ಪತಿವ್ರತಾನಾಂ ನಾಕಸ್ಮಾತ್
ಪತಂತ್ಯಶ್ರೂಣಿ ಭೂತಲೇ

ಓ ರಾಜಾ! ಪತಿವ್ರತೆಯರ ಕಣ್ಣೀರು ಭೂಮಿಯ ಮೇಲೆ ನಿಷ್ಫಲವಾಗಿ ಬೀಳದು. ಹಾಗೆ ಬಿದ್ದಲ್ಲಿ ಹಿರಿದಾದ ಅನರ್ಥ ಅನಿವಾರ್ಯ ಎಂದು ಸಾಮಾನ್ಯವಾಗಿ ಹೇಳುವ ಮಾತು ನಿನ್ನ ವಿಷಯದಲ್ಲಿ ನಿಜವಾಯಿತು.

ರಾವಣನ ಹೆಂಡತಿಯಾದ ಮಂಡೋದರಿ ಮಹಾಪತಿವ್ರತೆ ಆಕೆಯ ಪಾತಿವ್ರತ್ಯ ಮಹಿಮೆಯೇ ಆಕೆಗೆ ಇಂತಹ ಅಪೂರ್ವ ಜ್ಞಾನವನ್ನು ದೊರಕಿಸಿಕೊಟ್ಟಿದೆ. ಸೀತೆಯನ್ನು ರಾಮನಿಗೆ ಒಪ್ಪಿಸಿ ತನ್ನನ್ನೇ ಅಲ್ಲದೆ ಲಂಕೆಯನ್ನು ರಕ್ಷಿಸಿಕೊಳ್ಳಬೇಕೆಂದು ಆಕೆ ಹಲವು ರೀತಿಯಲ್ಲಿ ರಾವಣನಿಗೆ ಹೇಳಿದರೂ ಅವನು ಕೇಳದೆ ಹೋದದ್ದರಿಂದಲೇ ಅವನಿಗೆ ವಿನಾಶವುಂಟಾಯಿತು. ಶ್ರೀರಾಮನು ಶ್ರೀಮನ್ನಾರಾಯಣನು, ಸೀತೆಯೇ ಮಹಾಲಕ್ಷ್ಮಿ, ವಾನರರೇ ದೇವತೆಗಳು ಎಂದು ತಿಳಿದ ಸಾತ್ವಿಕಳಾಗಿದ್ದುದರಿಂದಲೇ ಶ್ರೀರಾಮನನ್ನು ಸ್ತುತಿಸಿದಳು. ಈ ರೀತಿಯಾಗಿ ಶ್ರೀರಾಮತತ್ತ್ವವನ್ನು ತಿಳಿದವರಲ್ಲಿ ಮಂಡೋದರಿ ಪ್ರಮುಖಳು.

# ಪೂರ್ವಕರ್ಮಫಲ

"ಆರೇನ ಮಾಡುವರು ಭುವನದೊಳಗೆ ।
ಪೂರ್ವಜನ್ಮದಕರ್ಮ ಪಣೆಯಲ್ಲಿ ಬರೆದುದಕೆ॥"

ಎಂಬುವ ಪುರಂದರದಾಸರ ಪದ ವಿಧಿ ಬರಹದ ಬಗ್ಗೆ ಜಿಜ್ಞಾಸೆ ಬಂದಾಗ ಹಿರಿಯರು ಉದಹರಿಸುತ್ತಾರೆ. ಮಾನವ ತಾನು ಸ್ವತಂತ್ರನಲ್ಲ. ತಾನು ಇಚ್ಛಿಸಿದಂತೆ ಎಲ್ಲವೂ ನಡೆಯುವುದಿಲ್ಲ. ಯಾವುದೋ ಅವ್ಯಕ್ತಶಕ್ತಿ ಅದೃಷ್ಯ ರೂಪದಿಂದ ನಮ್ಮನ್ನು ನಿಯಂತ್ರಿಸುತ್ತದೆ. ಅದನ್ನು ಆಸ್ತಿಕರು ದೇವರೆನ್ನುವರು. ವಿಚಾರ ಪರರು ನಮ್ಮ ಪೂರ್ವ ಪುಣ್ಯದ ಫಲವೆನ್ನುವರು. ಘನವಿದ್ವಾಂಸ ಆರ್ಥಿಕವಾಗಿ ಬಳಲುತ್ತಾನೆ. ನಿರಕ್ಷರಕುಕ್ಷಿ ಧನವಂತನಾಗಿ ಸುಖಭೋಗಗಳನ್ನು ಅನುಭವಿಸುತ್ತಾನೆ. ಬಹು ಮೇಧಾವಿ ಕೆಲಸಕ್ಕೆ ಬಾರದವನಾಗುತ್ತಾನೆ. ದಡ್ಡ ದುಡ್ಡಪ್ಪನಾಗುತ್ತಾನೆ. ಈ ವಿಧಿಯ ವೈಚಿತ್ರ್ಯವೇನು ? "ತೇನವಿನಾ ತೃಣಮಪಿ ನಚಲತಿ" ಎಂಬುವ ವಾದವನ್ನು ಇಟ್ಟಾಗ ಪರಮಾತ್ಮನು ನಮ್ಮಗಳನ್ನು ನಿಯಂತ್ರಿಸುತ್ತಾನೆ. ನಾವು ಸ್ವತಃ ಯಾವುದನ್ನೂ ನಿರ್ಣಯಿಸಲು ಅಸಾಧ್ಯ ಎಂಬುವ ತೀರ್ಮಾಣಕ್ಕೆ ಬರುತ್ತೇವೆ. ಇನ್ನು ಕೆಲವರು 'ಮಾನವನ ಕ್ರಿಯೆಗಳನ್ನು ಆ ಪರಮಾತ್ಮ ನಿಯಂತ್ರಿಸಿದರೂ ಮಾನವನಿಗೆ ಸ್ವತಂತ್ರ ಕೊಟ್ಟಿರುತ್ತಾನೆ, ಅವನ ಜೀವನಕ್ಕೆ ಅವನೇ ಶಿಲ್ಪಿ. ಕರ್ಮ ಅಕರ್ಮಗಳು ತಾನಾಗಿರುವುದರಿಂದ ಅದರ ಫಲ ಅವನೇ ಅನುಭವಿಸಬೇಕು ಎಂಬುವ ಪ್ರತಿವಾದವನ್ನು ಮಾಡುವಾಗ

ಈಶ್ವರೇಣ ನಿಯುಕ್ತೋ ಹಿ
ಸಾಧ್ವಸಾಧು ಚ ಭಾರತ ।
ಕುರುತೇ ಪುರುಷಃ ಕರ್ಮ
ಫಲಮೀಶ್ವರಗಾಮಿ ತತ್ ॥

ಶುಭಾಶುಭ ಕರ್ಮಗಳಿಗೆ ಈಶ್ವರನು ಪ್ರೇರಕನೆಂದು ಅದರ ಫಲವೂ ಈಶ್ವರನಿಗೆ ಸೇರಿದ್ದೆಂದು ತಿಳಿಯುವುದು ಉಚಿತವಲ್ಲ, ಕಾರ್ಯಗಳಿಗೆ ತಾನೇ ಕಾರಣನು. ಕಾರಣ ಅವುಗಳು ಅವನ ಹಿಂದಿನ ಜನ್ಮದ ಕರ್ಮ ಫಲ. ಇದೇ ವಿಧಿ. ಇದೇ ಅದೃಷ್ಟ, ಒಬ್ಬ ಮನುಷನ ಜೀವನ ಅವನ ಗತಜನ್ಮದ ಪಾಪ ಪುಣ್ಯಗಳ ಮೇಲೆ ನಿಂತಿದೆ. ಮಹಾಭಾರತದ ಶಾಂತಿ ಪರ್ವದಲ್ಲಿ ವ್ಯಾಸರು,

ತ್ವಷ್ಟ್ರೇವ ವಿಹಿತಂ ಯಂತ್ರಂ
ಯಥಾಚೇಷ್ಟಯಿತುರ್ವಶೇ ।
ಕರ್ಮಣಾ ಕಾಲಯುಕ್ತೇನ
ತಥೇದಂ ಚೇಷ್ಟತೇ ಜಗತ್ ॥

–ಹೇಗೆ ಕೀಲು ಗೊಂಬೆಯು ಆಡಿಸುವವನ ಅಧೀನದಲ್ಲಿರುತ್ತೋ, ಅದೇ ರೀತಿ ಈಶ್ವರನಿಂದ ನಿರ್ಮಿತವಾದ ಈ ಪ್ರಪಂಚ ಕಾಲನ ವಶವಾಗಿರುತ್ತದೆ. ಕಾಲನು ಮಾನವನ ಕರ್ಮಗಳಿಗೆ ಸಾಕ್ಷಿಯಾಗಿರುವುದರಿಂದ ಅವನ ಪಾಪ ಪುಣ್ಯಗಳ ಫಲ ಕೊಡುತ್ತಾನೆ. ನಾವು ಕೂಡಿಟ್ಟ ಹಣವನ್ನು ನಾವು ಆಯವ್ಯಯ ಮಾಡಲು ಸ್ವತಂತ್ರರು ಹಾಗೂ ಸಾಮರ್ಥ್ಯವುಳ್ಳವರಾಗಿರುವಾಗ ಹಾಗೆಯೇ ಹಿಂದಿನ ಜನ್ಮದ ಪೂರ್ವಪುಣ್ಯ ಪಾಪಗಳ ಫಲ ಅನುಭವಿಸಲು ಸಮರ್ಥರು. ಪೂರ್ವ ಪುಣ್ಯದ ಫಲ ಸುಖಭೋಗ, ಕ್ಷೀಣಪುಣ್ಯದಿಂದ ಕಷ್ಟಕಾರ್ಪಣ್ಯ. ಈ ಸಿದ್ಧಾಂತದಿಂದ ವರ್ತಮಾನ ಕಾಲದಲ್ಲಿ ನಮ್ಮ ನಡುವಳಿಕೆ ಚೆನ್ನಾಗಿರಬೇಕೆಂಬ ಕಟ್ಟಲೆಯ ಕೋಟೆಯನ್ನು ಕಟ್ಟಲೇಬೇಕು. ಅದು ಮುಂದಿನ ಜನ್ಮ ಸುಖದ ಸೋಪಾನಕ್ಕೆ ಮೆಟ್ಟಲು. ಹಿಂದಿನ ಜನ್ಮದ ವಿಧಿ ಬರಹವನ್ನು ಯಾರೂ ತಪ್ಪಿಸಕೊಳ್ಳಲಾರರು. ಆದರೆ ಭಗವತ್‌ಪ್ರೇಮವೆಂಬ ನಾವೆಯಲ್ಲಿ ಅಗಾಧ ಸಂಸಾರ ಸಾಗರವನ್ನು ದಾಟಬಹುದು. ಹಿಂದಿನ ಕ್ಷೀಣ ಕಾರ್ಯಗಳ ಕಾವನ್ನು ಕಮ್ಮಿ ಮಾಡಕೊಳ್ಳಬಹುದು ಇದಕ್ಕೆ ಪ್ರಮಾಣ;

ಶುಭಾಶುಭ ಫಲಂ ಪ್ರೇತ್ಯ
ಲಭತೇ ಭೂತಸಾಕ್ಷಿಕಂ
ಅತಿರಿಚ್ಯೇತ ಯೋ ಯತ್ರ
ತತ್ಕರ್ತಾ ಲಭತೇ ಫಲಂ

ಕಾರಣ ನಾವು ಮಾಡುವ ಶುಭಾಶುಭ ಕರ್ಮಗಳನ್ನು ಪಂಚಭೂತಗಳು ಸಾಕ್ಷಿಯಾಗಿರುತ್ತವೆ.

ಪುರಂದರದಾಸರು ವಿಧಿ ಬರಹವನ್ನು ಉದಹರಿಸುವಾಗ ಪ್ರಾಚೀನ ಕರ್ಮದ ವೈಶಿಷ್ಟ್ಯತೆ ಹೇಳುವಾಗ ಹೀಗೆಂದು ಹಾಡಿದ್ದಾರೆ,

ಮಾಡಿದಡಿಗೆಯು ಕೆಡಲು । ಮನೆಯ
ಗಂಡನು ಬಿಡಲು
ಕೂಡಿ ಇದ್ದಾ ಸತಿಯು ಕುಣಿದಾಡಲು
ಹೆತ್ತ ತಾಯಿ ಕರೆದು ಮಕ್ಕಳಿಗೆ ವಿಷಹಾಕಿದರೆ
ಮತ್ತೆ ತಂದೆಯು ಕರೆದು ಹೊರಗೆ ಮಾರಿದರೆ
ಅನ್ನ ಉಣ್ಣದ ಮನುಜಗೆ ಅಜೀರ್ಣವಾದರೆ
ಪುಣ್ಯ ತೀರ್ಥಂಗಳಲಿ ಪಾಪ ಘಟಿಸಿದರೆ
ಆರೇನ ಮಾಡುವರು ಭುವನದೊಳಗೆ
ಪೂರ್ವ ಜನ್ಮದ ಕರ್ಮ ಪಣೆಯಲ್ಲಿ
ಬರೆದುದಕೆ

ತಾನು ಮಾಡಿದ ಕರ್ಮ ತನಗಲ್ಲದೆ ಬೇರೆಯಾರಿಗೆ! ಅದು ಅವನು ಮಾಡಿದ ಹಿಂದಿನ ಕರ್ಮದ ಫಲ. ಈ ಕರ್ಮ ದೇವರನ್ನೂ ಬಿಡಲಿಲ್ಲ ಎಂಬುವ ಉದಾಹರಣೆ ಕೊಡುವಾಗ, ಕರ್ಮ ಮರಳಿ ಮರಳಿ ಮತ್ಸ್ಯಾವತಾರಿ ನೀರಿನಲ್ಲಿ ಮುಳುಗಿದರೂ ಬಿಡಲಿಲ್ಲ. ವಿಧಿಯ ನಿಯಮ ಹೊರೆ ಹೊತ್ತು ತಲೆಪರಟ ಗಟ್ಟಿದರೂ ಕೂರ್ಮಾವತಾರಿಯನ್ನು ಬಿಡಲಿಲ್ಲ. ವರಾಹವತಾರಿ ಭೂಮಿಯನ್ನು ಅಗೆದರೂ ತಪ್ಪಲಿಲ್ಲ. ಬಲಿತ ದೇಹವನ್ನು ಅಲ್ಪಮಾಡಿ ಬೇಡಿದರೂ ಬೆಂಬಿಡದೆ ಬಂತು ವಿಧಿಬರಹ, ವಾಮನನನ್ನು. ಆದ್ದರಿಂದ ಆರೇನ ಮಾಡುವರು ಆರಿಂದಲೇನಹುದು ಪೂರ್ವಜನ್ಮದ ಕರ್ಮ ವಿಧಿ ಬೆನ್ನ ಬಿಡದು ಎಂಬುವುದನ್ನು ತಿಳಿಸುವಾಗ ದಾಸರು ಹೇಳುತ್ತಾರೆ "ಐದು ವರ್ಷದ ಧ್ರುವ ಮಲತಾಯಿ ಸುರಚಿಯ ಕುತಂತ್ರದಿಂದ ತಂದೆಯನ್ನೂ ತೊರೆದು ತಪಸ್ಸಿಗೆ ಕಾಡಿಗೆ ಹೋಗ ಬೇಕಾಯಿತು. ಕಾಡು ಮೇಡುಗಳಲ್ಲಿ ಸೂರ್ಯನ ತಾಪವನ್ನು ಚಳಿಯ ದುಃಖವನ್ನೂ ಸಹಿಸಬೇಕಾಯಿತು. ಅವತಾರಿ ಅಯೋಧ್ಯರಾಮನು ಅಪರಿಮಿತ ಶೂರ ಲಕ್ಷ್ಮಣನು ಇದ್ದರೂ ಸೀತೆಯನ್ನು ರಾವಣನು ಕದ್ದಾಗ ಇವರಿಂದ ಕಿಂಚಿತ್ ಸಹಾಯವೂ ಸೀತೆಗೆ ಲಭಿಸಲಿಲ್ಲ.

ಪಾಪಿ ದುಶ್ಶಾಶನ ದ್ರೌಪದಿಯ ಸೀರೆಯ ಸುಲಿದು ಕೋಪದಿಂದ ಮಾನಭಂಗವ ಮಾಡಲು ಆಪತ್ತು ಬೆನ್ನಟ್ಟಿ ಬಂದಾಗ ಐವರು ಭೂಪತಿಗಳಾದ ಪಂಚಪಾಂಡವರು ಇದ್ದರೂ ಪ್ರಯೋಜನವಾಗಲಿಲ್ಲ. ಆಗ ಆ ಕೃಷ್ಣೆ "ಹಾ ಕೃಷ್ಣ ಹಾ ದ್ವಾರಕಾವಾಸಿನ್'' ಎಂದು ಕೂಗಿದಾಗ ಆ ಶ್ರೀಕೃಷ್ಣನ ಸಂಕೀರ್ತನೆ (ನಾಮ) ಒಂದೇ ಕಾಯಿತು. ಅಭಿಮನ್ಯು ಗಾಂಢೀವನ ಮಗ, ಶ್ರೀಕೃಷ್ಣ ಸೋದರಮಾವ, ಯುದಿಷ್ಠಿರ ಭೀಮ ಸೇನಾದಿಗಳು ಅತಿಮಹಾರಥರು. ಇವರೆಲ್ಲರ ಬೆಂಬಲವಿದ್ದರೂ, ಅಭಿಮನ್ಯು ಚಕ್ರವ್ಯೂಹದಲ್ಲಿ ಸಿಲುಕಿ ಅನಾಥನಾಗಿ ಸಾಯಬೇಕಾಯಿತು. ಆದ್ದರಿಂದಲೇ ಪುರಂದರದಾಸರು

**ಶ್ರೀ ಕಂದಾಡೈ ಕೇಶವನ್**

"ಬ್ರಹ್ಮ ಶಿರಕರ ಕಚ್ಚಿ ಶಿವನ ಪೀಡಿಸುತಿರಲು
ಸುಮ್ಮನೆ ಜಗವನೆಲ್ಲವ ತಿರುಗಿದ ।
ಬೊಮ್ಮ ಮೂರುತಿಯಾದ ಪುರಂದರವಿಠಲನೇ
ನಮ್ಮ ಅಳವಿಲ್ಲ ವಿಧಿಮೀರಿ ಬಾಳುವರೆ ॥"

ಕರ್ಮಫಲದ ಬಗ್ಗೆ ಮಹಾ ಭಾರತದ ಶಾಂತಿ ಪರ್ವದಲ್ಲಿ ವ್ಯಾಸರು ಸೊಗಸಾದ ಉದಾರಣೆ ಕೊಟ್ಟಿದ್ದಾರೆ.

ಅಚೋದ್ಯಮಾನಾನಿ ಯಥಾ
ಪುಷ್ಪಾಣಿ ಚ ಫಲಾಣಿ ಚ ।
ಸ್ವಂ ಕಾಲಂ ನಾತಿವರ್ತಂತೇ
ತಥಾ ಕರ್ಮ ಪುರಾಕೃತಂ ॥

ಫಲಪುಷ್ಪಗಳು ಯಾರ ಪ್ರೇರಣೆಯೇ ಇಲ್ಲದೆ ಋತುಕಾಲ ಬಂದಾಗ ತಮ್ಮ ತಮ್ಮಷ್ಟಕ್ಕೇ ಬರುತ್ತವೆ. ಹಾಗೆಯೇ ಪೂರ್ವಕರ್ಮದ ಫಲ ಕಾಲ ಬಂದಾಗ ಫಲಿಸುತ್ತವೆ. ನಾವು ಬೇಡಿದರೂ ಬೇಡದಿದ್ದರೂ ವಿಧಿಯು ತನ್ನ ಫಲಗಳನ್ನು ಕೊಡುತ್ತಾನೆ.

ಅವಶ್ಯಮೇವ ಭೋಕ್ತವ್ಯಂ
ಕೃತಂ ಕರ್ಮಶುಭಾಶುಭಂ ।
ನಾಭುಕ್ತಂ ಕ್ಷೀಯತೇ ಕರ್ಮ
ಕಲ್ಪಕೋಟೀಶತೈರಪಿ ॥

ಮಾಡಿದ ಪಾಪಪುಣ್ಯಗಳ ಪ್ರತಿ ಫಲವನ್ನು ಅವಶ್ಯಕವಾಗಿ ಎಲ್ಲರೂ ಅನುಭವಿಸಲೇ ಬೇಕು. ಕೋಟಿ ಜನ್ಮಗಳಾದರೂ ಅದನ್ನು ಅನುಭವಿಸದೇ ತಪ್ಪಿಸಿಕೊಳ್ಳವಂತಿಲ್ಲ. ಮಾಡಿದ್ದುಣ್ಣೋ ಮಹಾ ರಾಯ ಎಂಬ ನಾಣ್ಣುಡಿಯಂತೆ, ವಿಧಿಬರಹವನ್ನು ದೇವರೂ ತಪ್ಪಿಸಿಕೊಳ್ಳಲಾರ. ಇದು ಕರ್ಮ ನಿಯತಿ. ಕಾಲನ ನಿಯಮ ವಿಧಿಯ ವಿಶೇಷತೆ. ಸುವರ್ಣಜಿಂಕೆ ಇರುವುದು ಅಸಂಭವ. ಆದರೂ ಮರ್ಯಾದಾ ಪುರುಷೋತ್ತಮ ರಾಮನು ಅದಕ್ಕಾಗಿ ಆಸೆಪಟ್ಟು ಅದರ ಬೆನ್ನು ಹಿಂದೆ ಹೋದನು. ಸಾಮಾನ್ಯವಾಗಿ ವಿಪತ್ತು ಸಂಭವಿಸಿದಾಗ ಎಂತಹವನ ಬುದ್ಧಿಯೂ ಮಂಕಾಗುತ್ತದೆ. ಎಂತಹ ಮನುಷ್ಯನನ್ನೂ ಜರಾವ್ಯಾಧಿಗಳು ನಾಶಮಾಡುತ್ತವೆ. ಹಣವಿದ್ದಲ್ಲಿ ಆಪತ್ತು. ಪ್ರೀತಿಯಿದ್ದಲ್ಲಿ ತಕ್ಷಣವೇ ದ್ವೇಷ ಕಿಡಿಕಾರುತ್ತದೆ. ಹುಟ್ಟಿನೊಡನೆ ಸಾವು ಶತಃಸಿದ್ಧ.

ಇಹ ಯತ್ ಕ್ರಿಯತೇ ಕರ್ಮ
ಪರತ್ರೈವೋಪ ಭುಜ್ಯತೇ
ಸಿಕ್ತಮೂಲಸ್ಯ ವೃಕ್ಷಸ್ಯ
ಫಲಂ ಶಾಖಾಸು ದೃಶ್ಯತೇ

ಎಂಬಂತೆ ಇಲ್ಲಿ ನಾವು ಯಾವ ಕ್ರಿಯೆಯನ್ನು ಮಾಡುತ್ತೇವೆಯೋ ಅದರ ಫಲ ಪರದಲ್ಲಿ ಅಥವಾ ಮುಂದಿನ ಜನ್ಮದಲ್ಲಿ ಮರದ ಬೇರಿಗೆ ನೀರು ಹಾಕಿದರೆ ಮರದ ಹಣ್ಣುಗಳು ಕೊಂಬೆಗಳಲ್ಲಿ ಕಾಣಿಸಿಕೊಳ್ಳುವಂತೆ ಪ್ರಕಟವಾಗುತ್ತವೆ.

ಜಗತ್ತಿನ ಮಿತ್ರರಾದ ಸೂರ್ಯ ಚಂದ್ರಾದಿಗಳಿಗೂ ಗ್ರಹಣ ತಪ್ಪಿಲ್ಲ. ಎಂತಹ ಬಲಿಷ್ಠನಾದರೂ ಸೋಲು ಒಂದು ದಿವಸ ಖಂಡಿತ, ಎಲ್ಲವೂ ಪೂರ್ವ ಪುಣ್ಯ ಫಲದ ಮೇಲೆ ನಿಂತಿದೆ.

ದೈವೇ ಪುರುಷಕಾರೇ ಚ
ಕರ್ಮಸಿದ್ಧಿ ರ್ವ್ಯವಸ್ಥಿತಾ ।
ತತ್ರ ದೈವಮಭಿವ್ಯಕ್ತಂ
ಪೌರುಷಂ ಪೌರ್ವದೇಹಿಕಂ ॥

ಅದೃಷ್ಟ ಹಾಗೂ ಪುರುಷ ಪ್ರಯತ್ನದಿಂದ ಕಾರ್ಯಸಿದ್ಧಿಯಾಗುತ್ತದೆ. ಸತ್ಯವಾದ ವಿಷಯವೆಂದರೆ ಪೂರ್ವ ಜನ್ಮದಿಂದ ಆರ್ಜಿತವಾದ ಪೌರುಷವೇ ದೈವ ಹಾಗೂ ಅದೃಷ್ಟವೆಂದು ತಿಳಿಯಬೇಕು. ಮನುಷ್ಯನು ಅದೃಷ್ಟವೊಂದನ್ನೇ ನೆಚ್ಚಿಕೊಳ್ಳಬಾರದು. ಮಾನವನ ಪ್ರಯತ್ನವೂ ಬೇಕು. ಮನೆಯಲ್ಲಿ ಅಕ್ಕಿ ಬೇಳೆಯಿದ್ದರೂ ಮಾನವ ಅಡಿಗೆ ಮಾಡಲು ಪ್ರಯತ್ನಮಾಡದಿದ್ದರೆ ಊಟವನ್ನು ಮಾಡಲು ಹೇಗೆ ಆಗುವುದಿಲ್ಲವೋ ಹಾಗೆಯೇ ಪುರುಷಪ್ರಯತ್ನದಿಂದಲೂ ಕೂಡ ಕೆಲಸಗಳು ಸುಗಮ. ಪುರುಷಪ್ರಯತ್ನ ದೇವರನಾಮ ಸಂಕೀರ್ತನೆ ಇವುಗಳಿಂದ ವಿಧಿಯ ವಿಕಟ ಅಟ್ಟಹಾಸವನ್ನು ಮೆಟ್ಟಿ ನಿಲ್ಲಬಹುದು. ಭಾಗವತದಲ್ಲಿ ಶ್ರೀ ವ್ಯಾಸಮಹರ್ಷಿಗಳು 'ಶ್ರೀಹರಿಯ ನಾಮ ಸಂಕೀರ್ತನೆಯಿಂದ ಪ್ರಾರಬ್ಧ ಕರ್ಮಗಳನ್ನು ಕಳೆದುಕೊಳ್ಳಬಹುದು. ಹರಿನಾಮ ಬೆಂಕಿಯಂತೆ ಎಲ್ಲವನ್ನೂ ಸುಡಬಲ್ಲದು ಶುದ್ಧೀಕರಣ ಮಾಡಬಲ್ಲದು. ಪುಟಕ್ಕೆ ಹಾಕಿದ ಅಪರಂಜಿಯಂತೆ' ಎನ್ನುವರು, ನಿದರ್ಶನಕ್ಕೆ ಶಾಪಗ್ರಸ್ತನಾದ ಧುಂದುಕಾರಿಯು ಗೋಕರ್ಣನು ಹರಿಕಥಾ ಶ್ರವಣ ಮಾಡುತ್ತಿರಲು ಅದನ್ನು ಕೇಳಿ ತನ್ನ ಪ್ರೇತಜನ್ಮವನ್ನು ಕಳೆದು ಕೊಂಡ ಕಥೆ ಹಿತೋಪದೇಶದಲ್ಲಿದೆ.

ಪೂರ್ವ ಜನ್ಮ ಕೃತಂ ಕರ್ಮ
ತದ್ದೈವಮಿತಿ ಕಥ್ಯತೇ ।
ತಸ್ಮಾತ್ ಪುರುಷಕಾರೇಣ
ಯತ್ನಂ ಕುರ್ಯಾದತಂದ್ರಿತಃ ॥

ಪೂರ್ವಜನ್ಮದಲ್ಲಿ ಮಾಡಿದ ಕರ್ಮವನ್ನು ದೈವವೆಂದು ಹೇಳುತ್ತೇವೆ. ಆದ್ದರಿಂದ ಪ್ರಯತ್ನಪೂರ್ವಕ ಪುರುಷಪ್ರಯತ್ನವನ್ನು ಕಡ್ಡಾಯವಾಗಿ ಮಾಡಲೇಬೇಕು. ಮಾಡಿದ ಕರ್ಮ ಫಲಿಸುವುದು ನಿಧಾನವಾಗಬಹುದು. ಹೊರತು ಅದರ ಫಲ ಕಾಣತ [illegible] ಗೀತಾಚಾರ್ಯರ ನುಡಿ 'ನೀ ಕರ್ಮ ಮಾಡು, ಅದರ ಫಲ ನನಗೆ ಬಿಡು. ಫಲಾಪೇಕ್ಷೆ ಬೇಡ' ಎಂಬುವುದರ ಅರ್ಥ, ಫಲಗಳನ್ನು ಕೊಡುವುದು ಈಗಲೋ ಅಥವಾ ಮುಂದಕ್ಕೋ ಅದರ ಆಸಕ್ತಿ ಬೇಡ ಎಂಬುವುದನ್ನು ತಿಳಿಸಲು. ಕರ್ಮ ಮಾಡುವುದೊಂದೇ ಅವನ ಕರ್ತವ್ಯ, ಕಾರಣ ಲೋಕಸಂಗ್ರಹಕ್ಕಾಗಿ. ಕರ್ಮ ಕರ್ಮಕ್ಕಾಗಿ. ಇದರ ಮೇಲೆಯೇ ಜಗತ್ತಿನ ಚಕ್ರ ನಿಂತಿರುವುದು. ಸೂರ್ಯ ಸದಾ ಆಕಾಶದಲ್ಲಿ ತನ್ನ ಕಾರ್ಯ ಮಾಡುತ್ತಿರುವಂತೆ.

ಯಥಾ ಬೀಜಂ ವಿನಾ ಕ್ಷೇತ್ರ
ಮುಪ್ತಂ ಭವತಿ ನಿಷ್ಫಲಂ ।
ತಥಾ ಪುರುಷ ಕಾರೇಣ
ವಿನಾ ದೈವಂ ನ ಸಿದ್ಧ್ಯತಿ ॥

ಬೀಜವಿಲ್ಲದೆ ಹೊಲವನ್ನು ಕೃಷಿಮಾಡಲು ಹೇಗೆ ನಿಷ್ಫಲವಾಗುತ್ತದೆಯೋ ಹಾಗೆಯೇ ಪುರುಷ ಪ್ರಯತ್ನವಿಲ್ಲದಿದ್ದರೆ ದೈವವೂ ಫಲವನ್ನು ನೀಡುವುದಿಲ್ಲ, ಆದ್ದರಿಂದ ಎಲ್ಲಾ ಕಾಲಕ್ಕೂ ಪುರುಷ ಪ್ರಯತ್ನ ಆವಶ್ಯಕ, ಈ ಪುರುಷ ಪ್ರಯತ್ನದ ಫಲವೇ ಪೂರ್ವಪುಣ್ಯ ಫಲ ಪೂರ್ವ ಜನ್ಮದ ಕರ್ಮ ಬಲವಂತವಾಗಿದ್ದರೆ ಈ ಜನ್ಮದ ಕಾರ್ಯಗಳಿಂದ ಆ ಜನ್ಮದ ಅಲ್ಪಭಾಗ್ಯವನ್ನು ತೊಳೆದು ಹಾಕಬಹುದು. ಒಳ್ಳೆಯ ಭಾಗ್ಯವನ್ನು ಪಡೆಯುವುದರಲ್ಲಿ ಸಂಶಯವಿಲ್ಲ, ಆದ್ದರಿಂದಲೇ ಮಹಾಭಾರತದಲ್ಲಿ ವ್ಯಾಸರು

ಶುಭೇನ ಕರ್ಮಣಾ ಸೌಖ್ಯಂ
ದುಃಖಂ ಪಾಪೇನ ಕರ್ಮಣಾ ।
ಕೃತಂ ಭವತಿ ಸರ್ವತ್ರ
ನಾಕೃತಂ ವಿದ್ಯತೇ ಕ್ವಚಿತ್ ॥

ಅಂದರೆ ಶುಭ ಕರ್ಮದಿಂದ ಸೌಖ್ಯ, ಪಾಪಕರ್ಮಗಳಿಂದ ದುಃಖ ಎಲ್ಲವೂ ಕರ್ಮಾಧೀನ. ಆದ್ದರಿಂದ ಕರ್ಮ ಮಾಡದೆ ಯಾವುದೂ ಫಲಿಸುವುದಿಲ್ಲ. ಕರ್ಮವನ್ನು ಸದಾ ಮಾಡು. ಎಂಬುವುದಾಗಿ ಉಪದೇಶಿಸಿದರು. ಆದ್ದರಿಂದಲೇ ಋಷಿಗಳು

ಸರ್ವಂ ಕರ್ಮೇದಮಾಯತ್ತಂ
ವಿಧಾನೇ ದೈವಮಾನುಷಿ

ಎಂಬುವುದಾಗಿ ಸಾರಿದರು. "ಮಹತಾ ಪುಣ್ಯಯೋಗೇನ ಮಾನುಷಂ ಜನ್ಮ ಲಭ್ಯತೇ । ತತ್ಪ್ರಾಪ್ಯ ನ ಕೃತೋ ಧರ್ಮಃ ಕೀದೃಶಂ ಹಿ ಮಯಾ ಕೃತಂ" ಎಂಬಂತೆ ಮಾನವಜನ್ಮ ಪಡೆದರೂ ಒಳ್ಳೆಯ ಕಾರ್ಯ ಮಾಡದಿದ್ದರೆ, ನಾನು ಜೀವಿತದಲ್ಲಿ ಮಾಡಿದ್ದೇನು ಎಂಬುವ ಪಶ್ಚಾತ್ತಾಪ ಪಡುವುದಕ್ಕಿಂತ ಮುಂಚೆಯೇ ಒಳ್ಳೆಯ ಕಾರ್ಯಗಳನು ಮಾಡೋಣ. ★

# ಶ್ರೀ ವೆಂಕಟೇಶ್ವರಸ್ವಾಮಿದೇವಾಲಯ, ತಿರುಮಲೆ

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ದತ್ತಿಯನ್ನು ನೀಡ ಬಯಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಕಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯನ್ನು ರೂಪಿಸಲಾಗಿದೆ. ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ. ಈ ಯೋಜನೆಯ ಪರಿಧಿಯಲ್ಲಿ ಆರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಭಿಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಬರುವುದಿಲ್ಲ.

ಈ ಯೋಜನೆಯ ಹಲವು ವೈಶಿಷ್ಟ್ಯಗಳು ಹೀಗಿವೆ;

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟ್ ಅನ್ನು ಕಳುಹಿಸಬೇಕು. ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗಧಿ ಆಗಿರುವ ದತ್ತಿಯ ಮೌಲ್ಯ ರೂ: 3 ಲಕ್ಷ. ಇದರಲ್ಲಿ ಶುಕ್ರವಾರದ ಅಭಿಷೇಕವೂ ಸೇರವುದು.

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುವುದು. ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ, ತೋಮಾಲೆ, ಸಹಸ್ರನಾಮಾರ್ಚನೆ ಏಕಾಂತ ಸೇವೆಗಳು. ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು.

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು. ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು.

* ಆ ದಿನದ ಎಲ್ಲ ಆರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ಪೈಕಿಯವರು ವೀಕ್ಷಿಸಲು ಅನುಮತಿ ನೀಡಲಾಗುತ್ತದೆ.

* ದತ್ತಿ ನೀಡಿದವರಿಗೆ (1) ಶ್ರೀ ವೆಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ
  (2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು.

* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು (ಒಂದುಬಾರಿಗೆ 10% ದಂತೆ). ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ.ತಿ.ದೇ. ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ. ಆಗ ಸೇವೆಗಳನ್ನು ಇಬ್ಬರು ಅಥವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು. ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಿಸಲಾಗುವುದು.

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ
ಬರೆಯಿರಿ:

**ಕಾರ್ಯನಿರ್ವಹಣಾಧಿಕಾರಿ**

**ತಿ. ತಿ. ದೇ. ತಿರುಪತಿ.**

( 16ನೇ ಪುಟದಿಂದ )

ಮಿತಿಯ ಬಗ್ಗೆ ಖಚಿತ ಪರಿಕಲ್ಪನೆಯೂ ಇದೆ. ಅದನ್ನು ವಿವರಿಸುವ ಪದ್ಯ ಕನಕದಾಸರ ಪ್ರಸಿದ್ಧ ಪದ್ಯಗಳಲ್ಲಿ ಒಂದಾಗಿದೆ.

ದೀನ ನಾನು ಸಮಸ್ತ ಲೋಕಕೆ
ದಾನಿ ನೀನು ವಿಚಾರಿಸಲು ಮತಿ
ಹೀನ ನಾನು ಮಹಾಮಹಿಮ
ಕೈವಲ್ಯಪತಿ ನೀನು
ಏನ ಬಲ್ಲೆನು ನಾನು ನೆರೆ ಸು
ಜ್ಞಾನ ಮೂರುತಿ ನೀನು ನಿನ್ನ ಸ
ಮ್ಮಾನರುಂಟೇ ದೇವ ರಕ್ಷಿಸು
ನಮ್ಮನನವರತ

ಇಲ್ಲಿಗೆ ಹರಿಯ ಗುಣ ವಿವರಣೆ ಮುಗಿದು ಜೀವನ ಕನೀಯತೆಯನ್ನು ಇನ್ನು ಮುಂದೆ ನಿರೂಪಿಸಲಾಗಿದೆ.

ಮರೆದನಭ್ಯುದಯದಲಿ ನಿಮ್ಮನು
ಮರೆಯೆನಾಪತ್ತಿನಲಿ ಪೊರೆಯೆಂ
ದೊರಲುವೆನು ಮನವೇಕ ಭಾವದೊಳಿಲ್ಲ
ನಿಮ್ಮಡಿಯ
ಮರೆದು ಬಾಹಿರನಾದವನ ನೀ
ಮರೆವರೇ ಹಸು ತನ್ನ ಕಂದನ
ಮರೆವುದೇ ಮಮತೆಯಲಿ ರಕ್ಷಿಸು
ನಮ್ಮನನವರತ

ಕನಕದಾಸರು ತಮ್ಮ ಪೂರ್ವಾಶ್ರಮದಲ್ಲಿ ಕನಕನಾಯಕರು, ಪಾಳೆಯಗಾರರಾಗಿದ್ದವರು, ದೇವಾಲಯವನ್ನು ಕಟ್ಟಿಸಿದರೂ ದೇವನನ್ನು ನಿರ್ಲಕ್ಷಿಸಿದವರು, ಎಂದು ಹೇಳಲಾಗಿದೆ. ಹರಿಯೇ ಹಿಂದೆ ಬಿದ್ದು 'ಕನಕಾ ನೀ ನನ್ನ ದಾಸನಾಗು' ಎಂದು ಹಿತ್ತಾಯಿಸಿದ್ದುಂಟು. ಒಂದೊಮ್ಮೆ ಯುದ್ಧಭೂಮಿಯಲ್ಲಿ ಪೆಟ್ಟು ತಿಂದುರುಳಿದ ಕನಕನನ್ನು ದೇವರು ಉಪಚರಿಸಿದನಂತೆ. ಆಗ ದಾಸರಿಗೆ ತಿಳಿವುಂಟಾಗಿ ಕನಕದಾಸರಾದರು – ಎಂದು ಕೀರ್ತನೆ ವಿವರಿಸುತ್ತದೆ. ಈ ಹಿನ್ನೆಲೆಯಲ್ಲಿಯಲ್ಲಿ ಈ ಪದ್ಯವನ್ನು ಗಮನಿಸಬೇಕು. ಮನವೇಕ ಭಾವದೊಳಿಲ್ಲ ಎಂಬುದೂ ಮುಖ್ಯವೆನಿಸುತ್ತದೆ, ಹರಿಭಕ್ತಿಸಾರದ ಹಿಂದಿನ ಪದ್ಯಗಳನ್ನು ಗಮನಿಸಿದಾಗ. ಮಾನವ ಮೂಲಭೂತವಾಗಿ ಸಂಶಯಾತ್ಮ – ವಿನಾಶವಾಗಬಾರದೆಂಬ ಆಸೆಯಿದೆ – ಎಂಬುದು ಇಲ್ಲಿ ಸ್ಪಷ್ಟವಾಗುತ್ತದೆ.

ಮುಂದೆ ಜನ್ಮಾಂತರಗಳಲ್ಲಿ ಜೀವರಾಶಿಯ ಪಯಣ, ಪಂಚೇಂದ್ರಿಯಗಳು, ಅರಿಷಡ್ವರ್ಗಗಳ ಸುಳಿಯಲ್ಲಿ ಜೀವನ ಭ್ರಮಣಗಳನ್ನು ವಿವರಿಸುತ್ತ ಕವಿ ಹೇಳುವುದು ಎಂದರೆ

ಏನ ಮಾಡಿದೊಡೇನು ಮುಕ್ತಿ
ಜ್ಞಾನವಿಲ್ಲದೊಡಿಲ್ಲ ಭಕ್ತಿಗೆ
ನೀನೇ ಕಾರಣನಾಗಿ ರಕ್ಷಿಸು
ನಮ್ಮನನವರತ

ಕವಿಯು ತಿಳಿದಂತೆ ಈ ನೀರ ಮೇಲಣ ಗುಳ್ಳೆಯಂತೆ ತೋರಿಮಡಗುವಂತಹ ಸಂಸಾರ ಬಹಳಾರ್ಣವದೊಳಗೆ ಮುಳುಗಿರುವ ತನ್ನನ್ನು ಆನಂದ ಪದವಿಗೇರಿಸಲು ಹರಿಗಿಂತ ಹಿರಿಯ ಬಾಂಧವರಿಲ್ಲ, ಕಾರಣ–

ಊರು ತನಗೊಂದಿಲ್ಲ ಹೊತ್ತ ಶ
ರೀರಗಳು ಮಿತಿಯಿಲ್ಲ ತಾ ಸಂ
ಚಾರಿಸವ ನೆಲವಿಲ್ಲ ನುಡಿಯುದ
ಭಾಷೆ ಮತ್ತಿಲ್ಲ
ಬೇರೆ ಹೊಸತೊಂದಿಲ್ಲ ಉಣ್ಣದ
ಸಾರವಸ್ತುಗಳಿಲ್ಲ ತನು ಸಂ
ಚಾರವೀ ಬಗೆಯಾಯ್ತು ರಕ್ಷಿಸು
ನಮ್ಮನನವರತ

ಇಲ್ಲೆಲ್ಲ ದೇಹದ ನಶ್ವರತೆಯನ್ನು ಕುರಿತು ದೀರ್ಘವಾಗಿ ಹೇಳಲಾಗಿದೆ. ಇಂದ್ರಿಯ ಲೋಲುಪತೆ, ಐಹಿಕ ಭೋಗಾಸಕ್ತಿಗಳನ್ನು ವಿವರಿಸಿ ಅವುಗಳಾವುವೂ ಕೊನೆಗೆ ಕೆಲಸಕ್ಕೆ ಬಾರದವುಗಳಾಗುತ್ತವೆ, ಅವನ ದಯೆಯೇ ಮುಖ್ಯವಾಗುತ್ತದೆ ಎಂದು ಹರಿ ಸರ್ವೋತ್ತಮತ್ವವನ್ನು ಬೆರಳುಮಾಡಿ ತೋರಿಸಲಾಗಿದೆ. ಈ ಬಗ್ಗೆ ಮತ್ತೊಂದು ಪದ್ಯವನ್ನೂ ನೋಡಬಹುದು.

ದೇಹದಾರಾಧಕನಾಗಿ ಬಹುವಿಧ
ಮೋಹದೇಳಿಗೆಯಾಗಿ ಮುಕುತಿಗೆ
ಬಾಹಿರನು ತಾನಾಗಿ ವಿಷಯಾದಿ
ಗಳಿಗೊಳಗಾಗಿ
ಹೇಯವೀ ಸಂಸಾರವೆನ್ನದೆ
ಮೋಹಿಸುವ ಮತಿಗೇಡಿ ಮಾನವ
ಸಾಹಸಿಯೆ ಸಟೆಮಾತು ರಕ್ಷಿಸು
ನಮ್ಮನನವರತ

ದೇಹದ ನಶ್ವರತೆಯನ್ನು ಮಾತ್ರವೇ ಅಲ್ಲ ದೇಹಿಗಳಲ್ಲಿ ಇದ್ದಿದಿರುವ ಅಂತರವನ್ನೂ ಸೂಕ್ಷ್ಮವಾಗಿ ನಿರೂಪಿಸಿ ಕುಲಯಾವುದು ಎಂಬುದನ್ನು ವಿವರಿಸುವ ಒಂದು ಪದ್ಯ ಬೋಧಕವಾಗಿ ವಿಚಾರಪ್ರಚೋದಕವಾಗಿದೆ.

ತೊಲಗುವರು ಕಡೆ ಕಡೆಗೆ ತಾ ಹೊಲೆ
ಹೊಲೆಯೆನುತ ಕಳವಳಿಸಿ ಮೂತ್ರದ
ಬಿಲದೊಳಗೆ ಬಂದುದ ಕಾಣದೆ ಬರಿದೆ
ಮನನೊಂದು
ಜಲದೊಳಗೆ ಮುಳುಗಿದರೆ ತೊಲಗದು
ಹೊಲಗೆಲಸವೀ ದೇಹದೊಳು ನೀ
ನೆಲಸಿರಲು ಹೊಲೆಯುಂಟೆ ರಕ್ಷಿಸು
ನಮ್ಮನನವರತ

ಇಲ್ಲಿ ಎಲ್ಲರಲ್ಲಿಯೂ ಹರಿಯಿರಲು ಹೊಲೆಯು ಯಾರು? ಎಂಬುದೂ, ಬರಿದೆ ಸ್ನಾನದಿಂದ–ಮೈತೊಳೆಯುವುದರಿಂದ ಹೊಲೆ ಹೋಗದು ಎಂಬುದೂ ಮುಖ್ಯವಾಗುತ್ತವೆ. ಮುಂಡೆ ಎಂಜಲು ಎಂಬುದನ್ನೂ ಹೀಗೆಯೇ ವಿಚಾರಿಸಿ ಆ ಮಾತೇ ಎಂಜಲು ಎನ್ನುತ್ತಾರೆ.

ಹೀಗೆ ಶತಕ ಪದ್ಯಗಳಲ್ಲಿ ಹರಿ ಸರ್ವೋತ್ತಮತ್ವ, ಅವನ ಸೌಲಭ್ಯಗಳನ್ನೂ, ಜೀವನ ಅಸ್ವಾತಂತ್ರ್ಯವನ್ನೂ ನಿರೂಪಿಸಿದ ತರುವಾಯ ಹರಿಭಕ್ತಸಾರ ಕೃತಿಯ ಫಲಶ್ರುತಿ ಮಂಗಳಶ್ಲೋಕಗಳನ್ನು ಹತ್ತು ಪದ್ಯಗಳಲ್ಲಿ ತಿಳಿಸುತ್ತ 'ಸಿರಿಕಾಗಿನೆಲೆಯಾದಿ ಕೇಶವ ತಾ ಕೃಪೆಯೊಳಗೆ ನುಡಿಸಿದನು ಈ ಭಕ್ತಿಸಾರವನು, ಜೋಕೆಯಲಿ ಬರೆದೋದಿ ಕೇಳ್ದರನಾಕುಲದಿ ಮಾಧವನು ಕರುಣಿಪ'– ಎನ್ನುವರು.

ಅನನ್ಯ ಶರಣ ಭಾವವೇ ಸರ್ವತ್ರ ಹರಿದಿರುವ ಹರಿಭಕ್ತಿಸಾರ ಕನ್ನಡದ ಶತಕ ಸಾಹಿತ್ಯದಲ್ಲಿ ಮಾತ್ರವೇ ಅಲ್ಲ, ಇಡೀ ಕನ್ನಡ ಸಾಹಿತ್ಯದಲ್ಲೇ ಒಂದು ರತ್ನದಂತೆ ಶೋಭಿಸುತ್ತದೆ. ಹಾಗಾಗಿಯೇ ಅದರ ಹಲವು ಪದ್ಯಗಳು ಇಂದೂ ನಾಡ ಜನರ ನಾಲಿಗೆಯ ಮೇಲೆ ನಲಿಯುತ್ತಿದೆ ಎಂದು ನಿರ್ಧಾರವಾಗಿ ಹೇಳಬಹುದು.

# ರಾಷ್ಟ್ರೀಯ ಹಬ್ಬ
# -ದೀಪಾವಳಿ-

ಶ್ರೀ ರಾ. ಅನಂತನಾರಾಯಣ



ಹಬ್ಬಗಳು ಹಿಂದೂ ಸಂಸ್ಕೃತಿಯ ಒಂದು ಮುಖ್ಯ ಅಂಗ. ಅವುಗಳಿಂದ ನಮ್ಮ ಬಾಳಿನ ಹಳೆಯ ಕೊಳಕುಗಳೂ, ಜಡತ್ವವೂ ಮಾಯವಾಗಿ, ಹೊಸ ಹೊಸ, ಉತ್ಸಾಹವೂ, ಮೆರಗೂ ದೈವಭಕ್ತಿಯೂ, ನಮಗೆ ಉಂಟಾಗುವುದು. ದೈವಭಕ್ತಿಯನ್ನು ಪ್ರಚೋದಿಸುವುದೂ, ಆತ್ಮದ ಕಡೆಗೆ ಮನವನ್ನು ತಿರುಗಿಸುವುದೂ, ಜೀವನವನ್ನು ಸೊಗಸಾಗಿ ಮಾಡಿಕೊಳ್ಳುವುದು ಈ ಹಬ್ಬಗಳ ಗುರಿ. ಹಬ್ಬಗಳಿಲ್ಲದಿದ್ದಲ್ಲಿ ನಮ್ಮ ಬಾಳು ಶುದ್ಧ ರಸಹೀನ, ಶುಷ್ಕ, ಸಂಸ್ಕೃತಿರಹಿತ ಬರಡು ಇರುವಿಕೆಯಾಗುತ್ತಿತ್ತು.

ಇಂತಹ ಹಬ್ಬಗಳಲ್ಲಿ ದೀಪಾವಳಿ ಅತಿ ಮುಖ್ಯವಾದುದು. ಇದು ಅಖಿಲ ಭಾರತದ ಹಬ್ಬ. ಕೆಲವು ಹಬ್ಬಗಳನ್ನು ಉತ್ತರ ಭಾರತದಲ್ಲಿ ಮಾತ್ರ ಆಚರಿಸುತ್ತಾರೆ. ಇನ್ನು ಕೆಲವನ್ನು ದಕ್ಷಿಣ ಭಾರತದಲ್ಲಿ ಮಾತ್ರ ಆಚರಿಸುತ್ತಾರೆ. ಆದರೆ ದೀಪಾವಳಿ ಸರ್ವ ವ್ಯಾಪಿಯಾದ ರಾಷ್ಟ್ರೀಯ ಹಬ್ಬ. ಕನ್ಯಾಕುಮಾರಿಯಿಂದ ಹಿಮಾಲಯದವರೆಗೆ, ಅಸ್ಸಾಂನಿಂದ ರಾಜಾಸ್ಥಾನದವರೆಗೆ ಈ ಹಬ್ಬವನ್ನು ಸಡಗರದಿಂದ ಆಚರಿಸುತ್ತಾರೆ. ನಮ್ಮ ದೇಶದಲ್ಲಿ ಎಲ್ಲರೂ, ಬೌದ್ಧರು ಜೈನರೂ ಕೂಡ ಇದರಲ್ಲಿ ಭಾಗವಹಿಸುತ್ತಾರೆ.

ದೀಪಾವಳಿ ಹಬ್ಬದ ಆಚರಣೆಗೆ ಒಂದು ಕತೆಯಿಂದ ಹುಟ್ಟಿದೆ. ಅಸ್ಸಾಂ ರಾಜ್ಯದಲ್ಲಿ ಹಿಂದೆ ಪ್ರಾಗ್‌ಜ್ಯೋತಿಷವೆಂಬ ನಗರವಿತ್ತು. ಅಲ್ಲಿ ಭೌಮ ಎಂಬ ರಾಜನಿದ್ದನು. ಅವನು ಬಹಳ ದುರಹಂಕಾರಿ, ಕೊನೆಗೆ ಅವನ ಅಹಂಕಾರ ಉದ್ಧಟತನದಿಂದ ಅವನಿಗೆ ನರಕಾಸುರನೆಂಬ ಹೆಸರು ಬಂದಿತು. ಸಾಧುಗಳನ್ನು ಸತ್ಪುರುಷರನ್ನು, ಸತ್ಕಾರ್ಯಗಳನ್ನು ದ್ವೇಷಿಸುವುದೇ ಅವನ ಸ್ವಭಾವವಾಗಿತ್ತು. ತನ್ನ ಶಕ್ತಿ, ಪರಾಕ್ರಮ, ಮಹಿಮೆಗಳನ್ನು ಹೆಚ್ಚಿಸಿಕೊಳ್ಳುವುದಕ್ಕಾಗಿಯೇ ಅವನು ಉಗ್ರ ತಪಸ್ಸನ್ನು ಮಾಡಿ ದೇವರಿಂದ ವರಗಳನ್ನು ಪಡೆದುಕೊಂಡನು. ಅಗ್ನಿಕೋಟೆ, ವಾಯುಕೋಟೆ ಮುಂತಾದ ಹಲವು ಅಭೇದ್ಯನಗರಗಳನ್ನು ಕಟ್ಟಿಕೊಂಡು ಅಜೇಯನಾಗಿದ್ದನು. ಜಗತ್ತೆಲ್ಲಾ ಅವನನ್ನು ಕಂಡು ನಡುಗುತ್ತಿತ್ತು. ಯಾರಿಗೂ ಹೆದರದ ದುರಹಂಕಾರಿಗಳನ್ನು ಅಡಗಿಸಲು ಭಗವಂತನೇ ಆಯುಧವಾಗುತ್ತಾನೆ. ಪರಮಾತ್ಮನೇ ಅವತಾರಮಾಡಿ ನರಕಾಸುರ ತಂತ್ರಗಳನ್ನೆಲ್ಲಾ ಧ್ವಂಸ ಮಾಡಿ ಅವನನ್ನು ಕೊಲ್ಲಬೇಕಾಯಿತು. ಇದರಿಂದ ಅವನ ತಾಯಿಗೆ ತುಂಬಾ ದುಃಖವುಂಟಾಯಿತು. ಅವಳು ಪರಮಾತ್ಮನಲ್ಲಿ ಹೀಗೆ ಕೇಳಿಕೊಂಡಳಂತೆ, "ಪುತ್ರಶೋಕ ನನಗೆ ಉಂಟಾಯಿತು. ಅವರವರ ಕಾರ್ಯಫಲಗಳನ್ನು ಅವರವರು ಅನುಭವಿಸಬೇಕು. ನರಕಾಸುರನ ಅಹಂಕಾರದಿಂದ ಅವನಿಗೆ ಮರಣ ಬಂದಿದೆ. ಆದರೆ ಪರಮಾತ್ಮನ ಕೈಯಲ್ಲಿ ಸಾಯುವುದೂ ಮೋಕ್ಷವೇ. ಎಲೈ ಪ್ರಭುವೇ, ನನ್ನ ಮಗ ನರಕಾಸುರನು ಬದುಕಿರುವಾಗ ಅಕಾರ್ಯಗಳನ್ನು ಮಾಡಿ ಜನಕಂಟಕನೇ ಆದರೂ, ಅವನ ಮರಣದಲ್ಲಿಯಾದರೂ ಲೋಕದ ಜನ ಅವನನ್ನು ಕುರಿತು ಸದ್ಭಾವನೆಯನ್ನು ಹೊಂದಲಿ, ತಾಯಿಯಾದ ನಾನು ಮಗನ ಮರಣದಿಂದ ಇಂದು ದುಃಖಿತಳಾಗಿದ್ದರೂ, ಜಗತ್ತೆಲ್ಲಾ ಈ ದಿನವನ್ನು ದೀಪಮಾಲಿಕೆ, ನೂತನ ವಸ್ತ್ರಧಾರಣೆ, ಸುಖ ಸಂಭ್ರಮಗಳಿಂದ ಕಳೆಯಲಿ. ಈ ಕಾರಣಗಳಿಂದ ಮರಣದಲ್ಲಿಯಾದರೂ ನರಕಾಸುರನ ಹೆಸರು ಜನಪ್ರಿಯವಾಗಲಿ".

ತನಗೆ ಮಗನ ಮರಣದಿಂದ ದುಃಖ ಉಂಟಾದರೂ, ಆ ದಿನ ಜಗತ್ತೆಲ್ಲಾ, ಜಗತ್ತಿನ ಇತರ ತಾಯಿಂದಿರೆಲ್ಲಾ ಸುಖವಾರಲಿ ಎಂದು ಒಬ್ಬ ತಾಯಿ ಮಾತ್ರ ಹೇಳಬಲ್ಲಳು.

ದೀಪಾವಳಿಯಂದು ಎಣ್ಣೆ–ನೀರು ಹಾಕಿಕೊಳ್ಳುತ್ತೇವೆ. ಅಂದು ಎಣ್ಣೆಯಲ್ಲಿ ಲಕ್ಷ್ಮಿಯೂ, ಎಲ್ಲಾ ನೀರಿನಲ್ಲಿ ಗಂಗೆಯೂ ಇರುತ್ತಾರೆಂದು ಶಾಸ್ತ್ರ ಹೇಳುತ್ತದೆ.

(28 ನೆ ಪುಟ ನೋಡಿ)

(14ನೇ ಪುಟದಿಂದ)

ರಾಮಾ ನೀಯೆಡ ಪ್ರೇಮರಹಿತುಲಕು
ನಾಮ ರುಚಿ ತೆಲುಸುನಾ। ಓ ಸೀತಾ ॥

ಸ್ಮರಣೆ :

ಆರು ಬಾಳಿದರೇನು ಆರು ಬದುಕಿದರೇನು
ನಾರಾಯಣನ ಸ್ಮರಣೆ ನಮಗಿಲ್ಲದನಕ

*   *   *   *

ಮರೆಯದಿರು ಮರೆಯದಿರು ಮರುಳು ಮನುಜಾ
ನಾರಾಯಣನ ಸ್ಮರಣೆಯನು ಮಾಡು
ಮನುಜಾ

*   *   *   *

ಮರಚುವಾಡನಾ ರಾಮ ನಿನ್ನು ಮದನ
ಜನಕ
ಸ್ಮರಣೇ ಸುಖಮು ಶ್ರೀರಾಮ ನಾಮ

*   *   *   *

ಪಾದಸೇವನೆ

ತೊರೆದು ಜೀವಿಸಬಹುದೆ ಹರಿ ನಿನ್ನ ಚರಣಗಳ
ಮರೆಯಮಾತೇಕಿನ್ನು ಅರಿತು ಪೇಳುವೆನು
ತಾಯಿ ತಂದೆಯ ಬಿಟ್ಟು ತಪವ ಮಾಡಲು
ಬಹುದು
ದಾಯಾದಿ ಬಂಧುಗಳ ಬಿಡಲು ಬಹುದು
ರಾಯ ತಾ ಮುನಿದರೆ ರಾಜ್ಯವನು ಬಿಡ
ಬಹುದು
ಕಾಯಜನ ಪಿತ ನಿನ್ನ ಅಡಿಯ ಬಿಡಲಾಗದು

ಈ ಕೀರ್ತನೆಯಲ್ಲಿ ಮಾನವರಿಗೆ ದೇವರ ಪಾದ ಸೇವೆಯ ಪ್ರಾಮುಖ್ಯವನ್ನು ಸ್ಪಷ್ಟಪಡಿಸಿದ್ದಾರೆ.

ಎಂಥಕೀರುತಿವೊತ್ತುವೆರಡುಪಾದ-ಶ್ರೀ
ಕಾಂತ ಬಾಡದ ರಂಗ ಕರುಣಿ ದೇವೋತ್ತುಂಗ

—ಕೀರ್ತನೆಯಲ್ಲಿ ಪುರಾಣ ಕಥೆಗಳನ್ನು ಸ್ಮರಿಸಿದ್ದಾರೆ. ಅದೇರೀತಿಯಲ್ಲಿ 'ಶ್ರೀರಾಮಾಪಾದಮಾ' ಎಂಬ ಕೀರ್ತನೆಯಲ್ಲಿ ಪುರಾಣ ಕಥೆಗಳನ್ನು ತ್ಯಾಗರಾಜರು ಹಾಡಿದ್ದಾರೆ

ಸಂದೇಹಮುನು ದೀರ್ಪವಯ್ಯ ಸಾಕೇತ
ನಿಲಯ
ನಂದಾರ್ಚಿತ ಪದಯುಗಮುಲು ಮೇಲೋ
ನಾಗರಿಕಮಗು ಪದಯುಗಮುಲು ಮೇಲೋ

ತೀರ್ಮಾನಿಸಿಕೊಳ್ಳಿರೆಂದು ನಮಗೆ ವಿಚಾರಿಸ ಹೇಳುತ್ತಾರೆ. ಇದೇ ಪ್ರಕಾರ ಎಲ್ಲ ಭಕ್ತಿ ಭೇದಗಳನ್ನು ಸಮನ್ವಯಿಸಬಹುದು. ಕನಕದಾಸರು ತ್ಯಾಗರಾಜರ ಕೀರ್ತನೆಗಳಲ್ಲಿ ಭಾವ ಸಾಮ್ಯಗಳನ್ನು ನೋಡೋಣ,

'ಬಂಟನಾಗಿ ಬಾಗಿಲ ಕಾಯ್ವ—ಹರಿ ವೈ
ಕುಂಠದ ಸೊಂಪಿನ ದಾಸರ ಮನೆಯ
ಹೊರಸುತ್ತು ಪ್ರಾಕಾರ ಸುತ್ತಿ ಸಾ ಬರುವೆ
ಬರುವ ಹೋಗುವರ ವಿಚಾರಿಸುತಿರುವೆ
ಕರದಿ ಕಂಬಿಯ ಪೊತ್ತು ಅಲ್ಲಿನಿಂದಿರುವೆ ಶ್ರೀ
ಹರಿಯ ಸಮ್ಮುಖದ ಜಗದೊಳು ಇರುವೆ'

ಕೀರ್ತನೆಯಲ್ಲಿ ಊಳಿಗವ ಮಾಡುವುದು, ಚಾಮರವ ಬೀಸುವುದು, ಹಾಡುವುದು, ಪಾದಕಮಲವ ತೊಳೆವುದು, ಕುಸುಮದ ಮಾಲೆ ತಂದಿಡುವುದು, ಬಾಗಿಲ ಕಾಯುವುದು, ಚಾವಡಿರಜವನು ಬಳೆವುವದು, ರತ್ನಗಂಬಳಿ ಹೊತ್ತು ಹಾಸುವುದು ಇತ್ಯಾದಿಗಳ ಬಗ್ಗೆ ಹೇಳುತ್ತಾರೆ.

'ಬಂಟುರೀತಿ ಕೊಲುವೀಯವಯ್ಯ ರಾಮ
ರೋಮಾಂಚಮನೇ ವರಕಂಚುಕಮು
ರಾಮಭಕ್ತುಡನೇ ಮುದ್ರಬಿಳ್ಳಯು
ರಾಮನಾಮಮನೇ ವೀರಖಡ್ಗ ಮಿಚ್ಚಿ'

— ಎಂದು ಹೇಳುವುದು ತ್ಯಾಗರಾಜರ ಪದ್ಧತಿ. ಹರಿದಾಸರ ಸೇವೆ ಮಾಡುವುದು ಕನಕದಾಸರಿಗೆ, ಕೊಲುವುಕೂಟದಲ್ಲಿ ಸೇವೆ ಮಾಡುವುದು ತ್ಯಾಗರಾಜರಿಗೆ ಅಭೀಷ್ಟಕೈಂಕರ್ಯಗಳು,

'ಯಮದೂತರಿನ್ನೇನ ಮಾಡುವರು ಪೇಳೋ
ರಮೆಯರಸನೆ ನಿನ್ನ ಅರಿಕೆಯುಳ್ಳವರಿಗೆ'

ಎಂಬುವುದು ಕನಕದಾಸರ ಆತ್ಮಪ್ರತ್ಯಯ,

'ಚಿಂತಿಸ್ತುನ್ನಾಡೇ ಯಮುಡು
ಸತತಮು ಸುಜನುಲೆಲ್ಲ ಸದ್ಭಜನಚೇಯುಟ
ಜೂಚಿ'

— ಎಂದು ಯಮನಿಗೆ ಹುಟ್ಟಿದ ಚಿಂತೆಯನ್ನು ವ್ಯಂಗ್ಯವಾಗಿ ತ್ಯಾಗರಾಜರು ಹೇಳುತ್ತಾರೆ. 'ಭಜನ ಪರುಲಕೇಲ ದಂಡಪಾಣಿಭಯ' ವೆಂದು ಧೈರ್ಯ ಕೊಡುತ್ತಾರೆ.

ಬಲಗಳು ಅನೇಕವಿಧ. ಭುಜಬಲ, ಬುದ್ಧಿ ಬಲ ಶಸ್ತ್ರಬಲ ಇತ್ಯಾದಿ. ಆದರೆ ಈ ಬಲವೆಲ್ಲ ನಶ್ವರಗಳು. ಕನಕದಾಸರಿಗೆ ಇವೆಲ್ಲವೂ ಇದ್ದವು. ಆದರೆ ಕಾಲ ಕೈಕೂಡದ ವೇಳೆ ಇವೆಲ್ಲವು ವ್ಯರ್ಥವಾದವು. ಆದ್ದರಿಂದ ದಾಸರು ಅನುಭವಪೂರ್ವಕವಾಗಿ

ಆವ ಬಲವಿದ್ದರೇನು ವಾಸು
ದೇವನಾ ಬಲವು ನಿಜವಾಗಿ ಇರದನಕ

—ಎಂದು ಹೇಳುತ್ತಾರೆ. ಇದೇರೀತಿ ತ್ಯಾಗರಾಜರು ಗ್ರಹಬಲವನ್ನು ಕುರಿತು

ಗ್ರಹಬಲಮೇಮಿ ಶ್ರೀರಾಮಾನುಗ್ರಹಬಲಮೇ
ಬಲಮು
ಗ್ರಹಬಲಮೇಮಿ ತೇಜೋಮಯ ವಿ
ಗ್ರಹಮುನು ಧ್ಯಾನಿಂಚೇವಾರಿಕಿ ನವ

*   *   *   *

ಕುಲಬಲದಿಂದ ಇತರರನ್ನು ಪರಿಹಾಸಮಾಡುವ ಪ್ರವೃತ್ತಿಯನ್ನು ಕನಕದಾಸರು ಖಂಡಿಸಿದ್ದಾರೆ.

'ಕುಲ ಕುಲ ಕುಲವೆನ್ನುತಿಹಿರಿ
ಕುಲವಾವುದು ಸತ್ಯ ಸುಜನರಿಗೆ'
'ಕುಲ ಕುಲ ಕುಲವೆಂದು ಹೋರಾಡದಿರಿ
ನಿಮ್ಮ
ಕುಲದ ನೆಲೆಯನೇನಾದರು ಬಲ್ಲಿರಾ'

ತ್ಯಾಗರಾಜರು ಕುಲವರ್ಗವನ್ನು ಹೀಗೆ ನಿಂದಿಸಿದ್ದಾರೆ.

'ಬಲಮು ಕುಲಮು ಏಲ ರಾಮ—ಭಕ್ತಿ
ಕಾರಣಮು
ವೆಲಯು ಸಕಲಸಿದ್ಧುಲೆಲ್ಲ
ವೆಂಟವಚ್ಚುಗಾನಿ'

ಬಲ ಯಾತಕ್ಕೆ? ಕುಲ ಯಾತಕ್ಕೆ? ಭಕ್ತಿಯಿದ್ದರೆ ಸಾಕು ಸಿದ್ಧಿಗಳೆಲ್ಲ ಹೇಳದೆ ಬರುತ್ತದೆ.

ಏನು ಕೆಲಸಮಾಡಿದರೂ ಸಮಯವನ್ನು ನೋಡಿ ಮಾಡಬೇಕು. ಅಸಮಯದಲ್ಲಿ ಮಾಡಿದ ಪುಣ್ಯ ಕಾರ್ಯವು ಫಲವಂತವಾಗುವುದಿಲ್ಲ. ಕನಕದಾಸರು ಹಾಡಿದ ಕೀರ್ತನೆ ನೋಡಿ.

ಜಪವ ಮಾಡಿದರೇನು ತಪವ ಮಾಡಿದರೇನು
ವಿಪರೀತ ಕಪಟಗುಣ ಕಲುಷವಿದ್ದವರು
ನುಡಿನಡೆವ ಕಾಲದಲಿ ದಾನಮಾಡದೆ ಇರಲು
ಅಡವಿಯೊಳು ಕೆರೆ ತುಂಬಿ ಬತ್ತಿದಂತೆ

ಇದನ್ನೇ ತ್ಯಾಗರಾಜರು ;

ಸಮಯಮು ತೆಲಿಸಿ ಪುಣ್ಯಮುಲಾರ್ಜಿಂಚನಿ
ಧನಿಕುಡುಂಡಿ ಯೇಮಿ ಪೊಯ್ಯೇನೇಮಿ

ಇವರಿಬ್ಬರೂ ಮನುಜಸೇವೆಯನ್ನು ತಿರಸ್ಕರಿಸಿದ್ದಾರೆ. ಕನಕದಾಸರು ;

ಸಾಕು ಸಾಕು ಮನುಜ ಸೇವೆಯು—
ಶ್ರೀರಂಗರಾಯ
ಸಾಕು ಸಾಕು ಮನುಜಸೇವೆಯು
ಹೊತ್ತಾರೆದ್ದು ಹೋಗಿ ಪರರ
ಚಿತ್ತವೃತ್ತಿಗಳನೆ ಹಿಡಿದು
ಭೃತ್ಯನಂತೆ ಹಲ್ಲು ಕಿರಿದು
ಕೆಲಸಮಾಡಿ ದಣಿಯುವೆ—ರಿಕ್ತ
ಹಸ್ತದಿಂದ ಮನೆಯ ಸೇರುವೆ- ಈ ಉದರಕಾಗಿ
ಮತ್ತೆ ಕಂಡ ಕಡೆಗೆ ತಿರುಗುವೆ

ತ್ಯಾಗರಾಜರು

'ಕೊಂಚವು ನರುಲನು ನುತಿಂಚ ನಾವಲ್ಲನ
ಗಾದು'
'ಧರಣೀಶುಲ ಚೆಲಿಮೊಕ ಪದವಾ'

ಇದೇರೀತಿಯಲ್ಲಿ ಕಲಿಕಾಲ ವೈಚಿತ್ರ್ಯವನ್ನು ನೋಡಿ ವಿಚಾರಪಟ್ಟಿದ್ದಾರೆ.

ದಾಸರು

ಸತ್ಯಧರ್ಮಗಳೆಲ್ಲ ಎತ್ತ ಪೋದುವೊ ಕಾಣೆ

ಉತ್ತಮರ ಜೀವನಕೆ ದಾರಿಯಿಲ್ಲ
ವೇದವಿಪ್ರರು ತಮ್ಮ ವೃತ್ತಿ ಸ್ವಾಸ್ಥ್ಯವ ಕಳೆದು
... ... ... ... ...

ತ್ಯಾಗರಾಜರು
ಸತ್ತಲೇನಿ ದಿನಮುಲು ವಚ್ಚೆನಾ
ಕಲಿನರುಲಕು ಮಹಿಮಲು ದೆಲಿಪಿ
ಯೇಮಿಫಲಮನಲೇದ

ಈ ಕೀರ್ತನಕಾರರ ಪಲ್ಲವಿ ಆರಂಭಗಳ ಸಾಮ್ಯ ನೋಡೋಣ.

ಕನಕದಾಸರು
ಭಜಿಸಿ ಬದುಕೆಲೊ ಮನುಜ ಮನಮುಟ್ಟಿ ಶ್ರೀಹರಿಯ
ಅಜಸುರೇಂದ್ರಾದಿಗಳ ಆದಿವಂದಿತಪಾದ

ತ್ಯಾಗರಾಜರು
ಭಜನಸೇಯುವೇ ಮನಸಾ ಪರಮಭಕ್ತಿತೋ
ಅಜರುದ್ರಾದುಲಕು ಭೂಸುರಾದುಲ ಕರುದೈನ ರಾಮು
ಭಜನಸೇಯರಾದಾ

ಕನಕದಾಸರು
ನೀನೇನು ಮಾಡಲಾಪೆ ರಂಗಯ್ಯ ನಾ
ಮುನ್ನ ಮಾಡಿದ ಫಲವಿದೆ ಸಾಕು

ತ್ಯಾಗರಾಜರು
ನಿನ್ನಾಡನೇಲ ನೀರಜಾಕ್ಷ
ಕನ್ನವಾರಿಪೈನಿ ಕಾಕುಸೇಯನೇಲ

ಕನಕದಾಸರು
ನೀನುಪೇಕ್ಷೆಯ ಮಾಡೆ ಬೇರೆಗತಿ ಯಾರೆನಗೆ

ತ್ಯಾಗರಾಜರು
ರಾಮಾ! ನೀವೇಗಾನಿ ನನ್ನು ರಕ್ಷಿಂಚು ವಾರೆವರು

ಉತ್ತಮ ಶಾಸ್ತ್ರೀಯ ಸಂಗೀತ ಲಕ್ಷಣಗಳು – ಶುದ್ಧ ಬಗೆಯಭಾವ, ಶಬ್ದಜೋಡಣೆ, ಅರ್ಥ ಮತ್ತು ಸ್ವರ ಇವರ ಕೃತಿಗಳಲ್ಲಿ ಸರ್ವತ್ರ ಕಾಣಬಹುದು. ಕನಕದಾಸರೇ ಸಂಗೀತ ಲಕ್ಷಣವನ್ನು ಹೇಳಿದ್ದಾರೆ;

ಆಯತ ವಿಡುಪು ಸುಸ್ವರ ಷಡ್ಜ ಪಂಚಮ
ಸ್ಥಾಯಿ ಸಂಚರ ಠಾಯಿ ಸೀಮೆ
ಬಾಯಿದೆರೆಯೊಳಾಣೆ ಆಯತಪ್ಪದ ಗೀತ

ಪಂಚರತ್ನಗಳ ಸಂಪ್ರದಾಯ ಕನಕದಾಸರ ಕೃತಿಗಳಲ್ಲಿ ಇದೆ. ಚಂಪಕಾರಣ್ಯ ಎಂದು ಪ್ರಸಿದ್ಧವಾಗಿದ್ದ ಸ್ಥಳಕ್ಕೆ ಸಮೀಪದಲ್ಲಿ ನೆಲಸಿರುವ ಶ್ರೀ ಸಂಪಂಗಿ ರಾಮಸ್ವಾಮಿಯನ್ನು ಸಂದರ್ಶಿಸಿ ಭಕ್ತಿ ಪರವಶರಾಗಿ ಹಾಡಿದ ಕೀರ್ತನೆಗಳು ಪಂಚರತ್ನಗಳೆಂದು ಪ್ರಸಿದ್ಧವಾಗಿವೆ. ಇದೇರೀತಿ ತ್ಯಾಗರಾಜರ ತಿರುವೊತ್ತಿಯೂರ್ ಪಂಚರತ್ನ, ಕೋವೂರು ಸುಂದರೇಶ್ವರಸ್ವಾಮಿ ಪಂಚರತ್ನ, ಶೃಂಗಾರಪಂಚರತ್ನ, ಘನರಾಗಪಂಚರತ್ನಗಳು ಪ್ರಸಿದ್ಧವಾಗಿವೆ.

ಕನಕದಾಸರಲ್ಲಿ ಸಂಗೀತಸಾಹಿತ್ಯಗಳ ಸಮಾನ ಪ್ರಾಧಾನ್ಯವಿದೆ. ತ್ಯಾಗರಾಜರಲ್ಲಿ ಸಂಗೀತಕ್ಕೆ ಪ್ರಾಧಾನ್ಯ ಹೆಚ್ಚು. ಕನಕರ ಕೃತಿಯಲ್ಲಿ ಸಾಮಾಜಿಕ ಜೀವನ ಚಿತ್ರಣ ಜಾಸ್ತಿ. ದಾಸರಲ್ಲಿ ದೈವ ಸ್ತುತಿಗಳು ಕಡಿಮೆ. ತ್ಯಾಗರಾಜರಲ್ಲಿ ಈ ಗುಣ ವ್ಯತಿರೇಕವಾಗಿದೆ. ಕನಕದಾಸರು ತಿಳಿ ಕನ್ನಡದಲ್ಲಿ ಹಾಡಿದವರು.

ಭಕ್ತಿಮಾರ್ಗದಲ್ಲಿ ಪಯಣಮಾಡಿ ಜೀವನ್ಮುಕ್ತರಾದ ಕೀರ್ತಿ ಇಬ್ಬರಿಗೂ ಉಂಟು. ★

## ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ

### ತಿರುಚಾನೂರು

ತಿರುಚಾನೂರು ಶ್ರೀ ಪದ್ಮಾವತೀ ಅಮ್ಮನವರ ದೇವಾಲಯದಲ್ಲಿ ನಿತ್ಯಕುಂಕುಮಾರ್ಚನೆಯ ಶುಲ್ಕವನ್ನು ರೂ 150–00 ಗಳಿಗೆ ನಿಗದಿಗೊಳಿಸಲಾಗಿದೆ, ಈ ಹೊಸ ಶುಲ್ಕ ಪದ್ಧತಿ ಈ ಕೂಡಲೇ ಜಾರಿಗೆ ಬಂದಿದ್ದು ಈ ಹಿಂದೆಯೇ ನಿತ್ಯಕುಂಕುಮಾರ್ಚನೆಯನ್ನು ಮಾಡಿಸಲು ಶುಲ್ಕ ಪಾವತಿ ಮಾಡಿರುವ ಗೃಹಸ್ಥರ ಕೈಂಕರ್ಯವನ್ನು ಹಿಂದಿನಂತೆಯೇ ಮುಂದುವರಿಸಲಾಗುವುದು. ಆಸಕ್ತ ಭಕ್ತರು ವಿವರಗಳಿಗೆ ಸ್ಥಳೀಯ ಪೇಷ್ಕಾರ್ ಅವರನ್ನು ವಿಚಾರಿಸಬಹುದು.

**ಪೇಷ್ಕಾರ್**

(26 ನೇ ಪುಟದಿಂದ)

ನಾವು ಎಷ್ಟೇ ಕಷ್ಟದಲ್ಲಿದ್ದರೂ ಲೋಕದ ಜನರು ಸುಖವಾಗಿರಲಿ ಎಂಬುದನ್ನು ನಾವು ಬಯಸಬೇಕು. ಈ ನೀತಿಯನ್ನು ನರಕಾಸುರನ ತಾಯಿ ಜಗತ್ತಿಗೆ ದೀಪಾವಳಿಯ ಮೂಲಕ ಬೋಧಿಸಿದ್ದಾಳೆ.

ಮುಕ್ತಿ ದ್ವೇಷದಿಂದಲೂ ಬರುತ್ತದೆ. ದೈವ ಪ್ರೇಮದಿಂದಲೂ ಬರುತ್ತದೆ. ದ್ವೇಷದಲ್ಲಿ ಭಗವಂತನನ್ನು ತೀವ್ರವಾಗಿ ನೆನೆಯುತ್ತೇವೆ. ನಮ್ಮ ಪ್ರಕೃತಿಯ ಸ್ವಭಾವ ಅದು. ಭಾಗವತದಲ್ಲಿ ಹೀಗೆ ಹೇಳಿದ್ದಾರೆ.

ಯಥಾವೈರಾನು ಬಂಧೇನ
ಮರ್ತ್ಯಸ್ತನ್ಮಯತಾಮಿಯಾತ್
ನ ತಥಾ ಭಕ್ತಿ ಯೋಗೇನ
ಇತಿ ಮೇ ನಿಶ್ಚಿತಾಮತಿಃ
ವೈರೇಣ ಪೂತಪಾಪ್ಮಾನಃ
ತಮಾಪುರನುಚಿಂತಯಾ

"ಅವಿಚ್ಛಿನ್ನ ದ್ವೇಷದಿಂದ ಮನುಷ್ಯ ದೇವರನ್ನು ಸದಾ ನೆನೆಯುವಂತೆ ಪ್ರೇಮದಿಂದ ಸಹ ನೆನೆಯಲಾರ. ದ್ವೇಷದಿಂದ ಪಾಪವು ದಗ್ಧವಾಗಿ, ಪರಮಾತ್ಮನ ಸದಾ ಚಿಂತನೆಯಿಂದಲೇ ಅವನು ಭಗವಂತನನ್ನು ಹೊಂದುತ್ತಾನೆ ಇದು ನನ್ನ ನಿಶ್ಚಿತ ಅಭಿಪ್ರಾಯ".

ಮುಕ್ತಿಯನ್ನು ಕೊಡಲು ದೇವರನ್ನು ದ್ವೇಷಿಸಲೂ ಬೇಕೇ? ದೇವರು ಮುಕ್ತಿ ಕೊಡಲು ಕೊಲ್ಲಲೂ ಬೇಕೇ? ಏನೂ ಶ್ರಮವಿಲ್ಲದೆ ಯಾವುದೂ ಸಿಕ್ಕುವುದಿಲ್ಲ. ಪುರುಷಾರ್ಥದಿಂದ ಅಲ್ಪ ಪ್ರಾಪಂಚಿಕ ಫಲವನ್ನು ಹೊಂದಬೇಕಾದರೂ ನಾವು ಎಷ್ಟೋ ಕಷ್ಟಪಡಬೇಕಾಗುತ್ತದೆ. "ನಿಷ್ಪ್ರಯೋಜನವಾದ ಈ ನನ್ನ ಪ್ರಾಣವನ್ನು ತೆಗೆದುಕೊಂಡ ನನಗೆ ಮುಕ್ತಿಯನ್ನು ಕೊಡು" ಎಂದು ಒಬ್ಬ ಪ್ರಾರ್ಥಿಸುತ್ತಾನೆ.

ಹೀಗೆ ದೀಪಾವಳಿ ಹಬ್ಬ ಒಳಿತು ಕೆಡಕುಗಳ ನಡುವೆ ಒಳಿತನ್ನು ಆರಿಸಿಕೊಂಡು, ಮೃತ್ಯುವಿನಿಂದ ಅಮೃತತ್ವದ ಕಡೆಗೆ ನಡೆಯಲು ತೊಡಗಿಸುವ ಭಾರತೀಯ ಪರಂಪರೆಯ ಹಿರಿಯ ಹಬ್ಬವಾಗಿದೆ.

★

(11ನೇ ಪುಟದಿಂದ)

ಅರ್ಜುನ ಉವಾಚ–

ಯೋಽಯಂ ಯೋಗಸ್ತ್ವಯಾ ಪ್ರೋಕ್ತಃ
ಸಾಮ್ಯೇನ ಮಧುಸೂದನ ।
ಏತಸ್ಯಾಹಂ ನ ಪಶ್ಯಾಮಿ
ಚಂಚಲತ್ವಾತ್ ಸ್ಥಿತಿಂ ಸ್ಥಿರಾಮ್ ॥ 33

ಅರ್ಜುನ: ಕೃಷ್ಣ ಸಮದೃಷ್ಟಿಯಿಂದ ನೋಡಬೇಕೆಂದು ನೀನು ಈ ಮನಸ್ಸನ್ನು ಬಿಗಿಹಿಡಿಯುವ ಸಾಧನವನ್ನು ಹೇಳಿದೆಯಷ್ಟೆ. ಮನಸ್ಸು ಚಂಚಲವಾದ್ದರಿಂದ ಅದು ಹೀಗೆ ಒಂದು ಕಡೆ ನಿಲ್ಲುವಂತೆ ನನಗೆ ಕಾಣುವುದಿಲ್ಲ.

ಚಂಚಲಂ ಹಿ ಮನಃ ಕೃಷ್ಣ
ಪ್ರಮಾಥಿ ಬಲವದ್ ದೃಢಮ್ ।
ತಸ್ಯಾಹಂ ನಿಗ್ರಹಂ ಮನ್ಯೇ
ವಾಯೋರಿವ ಸುದುಷ್ಕರಮ್ ॥ 34

ಕೃಷ್ಣ, ಮನಸ್ಸು ಹರಿದಾಡುವಂಥಾದ್ದು; ನಮ್ಮನ್ನು ಗಾಸಿಗೊಳಿಸಿ ತನ್ನ ಪಟ್ಟನ್ನು ಬಿಡದೆ ಸಾಧಿಸಬಲ್ಲ ಬಲಶಾಲಿ. ಅದನ್ನು ಬಿಗಿಹಿಡಿಯುವುದೆಂದರೆ ಗಾಳಿಯನ್ನು ಕಟ್ಟಿಹಾಕಿದಂತೆ ಎಂದು ನನಗೆನ್ನಿಸುತ್ತದೆ.

ಶ್ರೀಭಗವಾನುವಾಚ–

ಅಸಂಶಯಂ ಮಹಾಬಾಹೋ
ಮನೋ ದುರ್ನಿಗ್ರಹಂ ಚಲಮ್ ।
ಅಭ್ಯಾಸೇನ ತು ಕೌಂತೇಯ
ವೈರಾಗ್ಯೇಣ ಚ ಗೃಹ್ಯತೇ ॥ 35

ಶ್ರೀಕೃಷ್ಣ : ಅರ್ಜುನ, ಮನಸ್ಸು ತಡೆಯುವುದಕ್ಕೆ ಆಗದ್ದೆಂಬುದೂ ಮತ್ತು ಚಂಚಲದ ಸ್ವಭಾವದ್ದೆಂಬುದೂ ನಿಶ್ಚಯ. ಆದರೆ ಅರ್ಜುನ, ಪ್ರಯತ್ನದಿಂದಲೂ ವೈರಾಗ್ಯದಿಂದಲೂ ಅದನ್ನು ಬಿಗಿಹಿಡಿಯುವುದಕ್ಕಾಗುತ್ತದೆ.

ಅಸಂಯತಾತ್ಮನಾ ಯೋಗೋ
ದುಷ್ಪ್ರಾಪ ಇತಿ ಮೇ ಮತಿಃ ।
ವಶ್ಯಾತ್ಮನಾ ತು ಯತತಾ
ಶಕ್ಯೋಽವಾಪ್ತುಮುಪಾಯತಃ ॥ 36

ಮನಸ್ಸನ್ನು ಬಿಗಿಹಿಡಿಯಲಾರದವನಿಗೆ ಧ್ಯಾನವು ದಕ್ಕುವ ಮಾತಲ್ಲವೆಂದು ನನ್ನ ಅಭಿಪ್ರಾಯ. ಪ್ರಯತ್ನದಿಂದ ಮನಸ್ಸನ್ನು ಹಿಡಿತಕ್ಕೆ ತಂದುಕೊಂಡವನಿಗೆ ಉಪಾಯದಿಂದ ಅದನ್ನು ಪಡೆಯುವುದಕ್ಕಾಗುತ್ತದೆ.

ಅರ್ಜುನ ಉವಾಚ–

ಅಯತಿಃ ಶ್ರದ್ಧಯೋಪೇತೋ
ಯೋಗಾಚ್ಚಲಿತಮಾನಸಃ ।
ಅಪ್ರಾಪ್ಯ ಯೋಗಸಂಸಿದ್ಧಿಂ
ಕಾಂ ಗತಿಂ ಕೃಷ್ಣ ಗಚ್ಛತಿ ॥ 37

ಅರ್ಜುನ : ಕೃಷ್ಣ, ಶಾಸ್ತ್ರದಲ್ಲಿಯೂ ಶ್ರದ್ಧೆಯುಳ್ಳವನು ಪ್ರಯತ್ನ ಮಾಡಲಾರದೆ ಧ್ಯಾನದಿಂದ ಚಂಚಲ ಮನಸ್ಸುಳ್ಳವನಾದರೆ ಯೋಗದ ಫಲವಾದ ಜ್ಞಾನವನ್ನು ಪಡೆಯದೆ ಅವನು ಮತ್ತೆ ಯಾವ ಗತಿಯನ್ನು ಪಡೆಯುತ್ತಾನೆ?

ಕಚ್ಚಿನ್ನೋಭಯವಿಭ್ರಷ್ಟಃ
ಛಿನ್ನಾಭ್ರಮಿವ ನಶ್ಯತಿ ।
ಅಪ್ರತಿಷ್ಠೋ ಮಹಾಬಾಹೋ
ವಿಮೂಢೋ ಬ್ರಹ್ಮಣಃ ಪಥಿ ॥ 38

ಕೃಷ್ಣ, ಬ್ರಹ್ಮವನ್ನು ಪಡೆಯುವ ದಾರಿಯಲ್ಲಿ ಗುರಿಯನ್ನು ಕಾಣದೆ ಕರ್ಮದ ಆಶ್ರಯವೂ ಇಲ್ಲದೆ ಎರಡೂ ಕೆಟ್ಟವನು ಚೂರುಚೂರಾದ ಮೋಡದಂತೆ ಹಾಳಾಗಿ ಹೋಗುವುದಿಲ್ಲವೇ?

ಏತನ್ಮೇ ಸಂಶಯಂ ಕೃಷ್ಣ
ಛೇತ್ತುಮರ್ಹಸ್ಯಶೇಷತಃ ।
ತ್ವದನ್ಯಃ ಸಂಶಯಸ್ಯಾಸ್ಯ
ಛೇತ್ತಾ ನ ಹ್ಯುಪಪದ್ಯತೇ ॥ 39

ಕೃಷ್ಣ, ನನ್ನ ಈ ಸಂಶಯವನ್ನು ಪೂರ್ಣವಾಗಿ ನೀನು ಕಳೆಯಬೇಕು. ಏಕೆಂದರೆ ನಿನ್ನ ಹೊರತು ಯಾರೂ ಈ ಸಂದೇಹವನ್ನು ಪರಿಹರಿಸಲಾರರು.

ಶ್ರೀಭಗವಾನುವಾಚ –

ಪಾರ್ಥ ನೈವೇಹ ನಾಮುತ್ರ
ವಿನಾಶಸ್ತಸ್ಯ ವಿದ್ಯತೇ ।
ನ ಹಿ ಕಲ್ಯಾಣಕೃತ್ಕಶ್ಚಿತ್
ದುರ್ಗತಿಂ ತಾತ ಗಚ್ಛತಿ ॥ 40

ಶ್ರೀಕೃಷ್ಣ : ಅರ್ಜುನ, ಇಹದಲ್ಲಿಯಾಗಲಿ, ಪರದಲ್ಲಿಯಾಗಲಿ ಅಂಥ ಸಾಧಕನ ಸಾಧನೆ ವ್ಯರ್ಥವಾಗುವುದಿಲ್ಲ. ಏಕೆಂದರೆ ಮಗು, ಒಳ್ಳೆಯದನ್ನು ಮಾಡಿದ ಯಾರೂ ಕೆಟ್ಟ ಗತಿಯನ್ನು ಹೊಂದುವುದಿಲ್ಲ.

ಪ್ರಾಪ್ಯ ಪುಣ್ಯಕೃತಾಂ ಲೋಕಾನ್
ಉಷಿತ್ವಾ ಶಾಶ್ವತೀಸ್ಸಮಾಃ ।
ಶುಚೀನಾಂ ಶ್ರೀಮತಾಂ ಗೇಹೇ
ಯೋಗಭ್ರಷ್ಟೋಽಭಿಜಾಯತೇ ॥ 41

ಅಂಥ ಯೋಗಭ್ರಷ್ಟನು ಪುಣ್ಯವಂತರು ಪಡೆಯುವ ಲೋಕಗಳನ್ನು ಪಡೆದು ಅನೇಕ ವರ್ಷಗಳು ಅಲ್ಲಿದ್ದು ಧರ್ಮಶ್ರದ್ಧೆಯುಳ್ಳ ಭಾಗ್ಯವಂತರ ಮನೆಯಲ್ಲಿ ಹುಟ್ಟುತ್ತಾನೆ.

ಅಥ ವಾ ಯೋಗಿನಾಮೇವ
ಕುಲೇ ಭವತಿ ಧೀಮತಾಮ್ ।
ಏತದ್ಧಿ ದುರ್ಲಭತರಂ
ಲೋಕೇ ಜನ್ಮ ಯದೀದೃಶಮ್ ॥ 42

ಅಥವಾ ಅವನು ಜ್ಞಾನಿಗಳಾದ ಯೋಗಾಭ್ಯಾಸಿಗಳ ಕುಲದಲ್ಲಿಯೇ ಹುಟ್ಟುತ್ತಾನೆ. ಜಗತ್ತಿನಲ್ಲಿ ಈ ಬಗೆಯ ಹುಟ್ಟು ದೊರೆಯುವುದು ಬಹು ದುರ್ಲಭ.

ತತ್ರ ತಂ ಬುದ್ಧಿಸಂಯೋಗಂ
ಲಭತೇ ಪೌರ್ವದೇಹಿಕಮ್ ।
ಯತತೇ ಚ ತತೋ ಭೂಯಃ
ಸಂಸಿದ್ಧೌ ಕುರುನಂದನ ॥ 43

ಅರ್ಜುನ, ಅವನು ಅಲ್ಲಿ ಆ ಹಿಂದಿನ ಜನ್ಮದ ಬುದ್ಧಿಯನ್ನು ಪಡೆಯುತ್ತಾನೆ. ಮತ್ತು ಜ್ಞಾನವನ್ನು ಮೈಗೂಡಿಸಿಕೊಳ್ಳುವುದಕ್ಕೆ ಇನ್ನೂ ಹೆಚ್ಚು ಪ್ರಯತ್ನವನ್ನು ಮಾಡುತ್ತಾನೆ.

# -ಪಂಚತಂತ್ರ-

ಪಂಚತಂತ್ರವನ್ನು ಕೈಗೆತ್ತಿಕೊಂಡು ಓದುತ್ತ ಕುಳಿತರೆ
ಪ್ರಪಂಚತಂತ್ರವೇ ಕಣ್ಣೆದುರಿಗೆ ಭಾಸವಾಗುತ್ತದೆ
ಬದುಕುವುದು ಹೇಗೆಂದು ತಿಳಿಸುವ ಈ ಕಥಾ ಸರಣಿ
ಅದೆಂತಹ ಕಾಂತಾಸಂಮಿತ ಉಪದೇಶಮಾಲೆ ! ॥ ೧ ॥

ಇಲ್ಲಿನ; ಇಲಿ, ಕಪೋತ, ಕಪ್ಪೆ, ಏಡಿ, ಮೀನು, ಮೊಸಳೆ
ನರಿ, ವಾನರ, ಸಿಂಹ, ಶಾರ್ದೂಲ, ಮುಂಗುಸಿ, ಎತ್ತು–
ಹತ್ತೇ, ಹದಿನಾರೇ? ನೂರಾರು; ಪಶು ಪಕ್ಷಿ ಮೃಗ ಜೀವಿಗಳು
ಎಲ್ಲವೂ ಹಿಂದಲ್ಲೊಂದು ಕಲಾ ಪರಿಣತಿಯುಳ್ಳವು ॥ ೨ ॥

ನರ-ವಾನರ ಬುದ್ಧಿಯ ಅವಿವೇಕಿಗಳಿಗೆ ವಿವೇಕ ಇಲ್ಲಿದೆ
ನರ-ಸಿಂಹ ರೂಪಿಗಳಿಗೆ ಇಲ್ಲಿದೆ ಜ್ಞಾನದ ಉಪದೇಶ
ಅನ್ಯೋಕ್ತಿಯಿಂದ ನುಡಿದರೂ ಇದು ಸ್ವಾನುಭವೋಕ್ತಿ ಸಾರ
'ಶಕ್ರಾದಪಿ ಕದಾಚನ' ಪರಿಭವವನ್ನೈದದ ಋಜುದಾರಿ ॥ ೩ ॥

ರೋಚಕ ಕಿರುಗತೆಗಳು ಶೃಂಖಲಾಸರಣಿಯಿಂದ
ತಂತ್ರದುದ್ದಕ್ಕೂ ಮಾಂತ್ರಿಕ ಬಲೆಯನ್ನು ಹರಡಿವೆ
ಅನುಭವದ ಅಮೃತರಸಸಾರ ಸೇಚನದಿಂದ
ಬಾಳನಂದನವನವೇ ಸಫಲರಸಪೂರ್ಣ ಸಂಸಾರವೃಕ್ಷ ॥ ೪ ॥

—ಕೆ. ಸುಬ್ರಹ್ಮಣ್ಯ ಭಟ್ಟ ಎಂ.ಎ; ಬಿ ಎಡ್

ಪೂರ್ವಾಭ್ಯಾಸೇನ ತೇನೈವ
ಹ್ರಿಯತೇ ಹ್ಯವಶೋಽಪಿ ಸಃ ।
ಜಿಜ್ಞಾಸುರಪಿ ಯೋಗಸ್ಯ
ಶಬ್ದಬ್ರಹ್ಮಾತಿವರ್ತತೇ ॥ 44

ಏಕೆಂದರೆ ಅವನು ಹೆಚ್ಚು ಪ್ರಯತ್ನವಿಲ್ಲದ ಹಿಂದಿನ ಜನ್ಮದ ಅಭ್ಯಾಸದ ಕಡೆಗೆ ಕೊಚ್ಚಿಕೊಂಡು ಹೋಗುತ್ತಾನೆ. ಯೋಗದ ಸ್ವರೂಪವನ್ನು ತಿಳಿಯಲಪೇಕ್ಷಿಸುವವನು ಕೂಡ ಎಲ್ಲ ಕರ್ಮಗಳ ಫಲವನ್ನೂ ಮೀರಿದವನಾಗುತ್ತಾನೆ.

ಪ್ರಯತ್ನಾದ್ಯತಮಾನಸ್ತು
ಯೋಗೀ ಸಂಶುದ್ಧ ಕಿಲ್ಬಿಷಃ ।
ಅನೇಕಜನ್ಮ ಸಂಸಿದ್ಧಃ
ತತೋ ಯಾತಿ ಪರಾಂ ಗತಿಮ್ ॥ 45

ಪ್ರಯತ್ನ ಪೂರ್ವಕವಾಗಿ ಯೋಗಸಾಧನೆಯಲ್ಲಿ ನಿರತವಾದ ಯೋಗಿಯಂತೂ ಪಾಪದ ಕೊಳೆಯನ್ನೆಲ್ಲ ಕಳೆದುಕೊಂಡು ಅನೇಕ ಜನ್ಮಗಳ ಸಾಧನೆಯ ಸಿದ್ಧಿಯ ಫಲವಾಗಿ ಕೊನೆಗೆ ಪರಮಪದವನ್ನು ಪಡೆಯುತ್ತಾನೆ

ತಪಸ್ವಿಭ್ಯೋಽಧಿಕೋ ಯೋಗೀ
ಜ್ಞಾನಿಭ್ಯೋಽಪಿ ಮತೋಽಧಿಕಃ ॥
ಕರ್ಮಿಭ್ಯಶ್ಚಾಧಿಕೋ ಯೋಗೀ
ತಸ್ಮಾದ್ಯೋಗೀ ಭವಾರ್ಜುನ ॥ 46

ಧ್ಯಾನಯೋಗಿಯು (ಉಪವಾಸ ಮೊದಲಾದವುಗಳನ್ನು ಮಾಡುವ) ತಪಸ್ವಿಗಳಿಗಿಂತಲೂ ಹೆಚ್ಚಿನವನು; (ಬರೀ ಶಾಸ್ತ್ರಾರ್ಥವನ್ನು) ತಿಳಿದವರಿಗಿಂತಲೂ ಹೆಚ್ಚಿನವನೆಂದು ಹೇಳಿಸಿಕೊಳ್ಳುವನು; ಧ್ಯಾನಯೋಗಿಯು ಬರಿಯ ಕರ್ಮಠರಿಗಿಂತಲೂ ಹೆಚ್ಚಿನವನು. ಆದ್ದರಿಂದ ಅರ್ಜುನ, ನೀನು ಧ್ಯಾನಯೋಗವನ್ನು ಹಿಡಿ.

ಯೋಗಿನಾಮಪಿ ಸರ್ವೇಷಾಂ
ಮದ್ಗತೇನಾಂತರಾತ್ಮನಾ ।
ಶ್ರದ್ಧಾವಾನ್ಭಜತೇ ಯೋ ಮಾಂ
ಸ ಮೇ ಯುಕ್ತತಮೋ ಮತಃ ॥ 47

ಎಲ್ಲ ಬಗೆಯ ಯೋಗಿಗಳಲ್ಲಿ ನನ್ನಲ್ಲೇ ಮನಸ್ಸು ನೆಟ್ಟು, ನನ್ನನ್ನೇ ಶ್ರದ್ಧೆಯಿಂದ ಯಾವನು ಧ್ಯಾನ ಮಾಡುತ್ತಾನೋ ಅವನು ಬಹಳ ಹೆಚ್ಚಿನವನೆಂದು ನನ್ನ ಅಭಿಪ್ರಾಯ.

ಇತಿ
ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮ-
ವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ-
ಸಂವಾದೇ ಧ್ಯಾನಯೋಗೋ ನಾಮ
ಷಷ್ಠೋಽಧ್ಯಾಯಃ ॥
6 ನೆಯ ಅಧ್ಯಾಯವು ಮುಗಿದುದು.

## ಕಿಶೋರಜಗತ್

# ಅವನಾರಣಿಸಲೆಂದು...

ಲೋಕದಲ್ಲಿ ಒಬ್ಬರಿಗಿಂತ ಒಬ್ಬರು ದೊಡ್ಡವರಿದ್ದಾರೆ. ಒಬ್ಬರಿಗಿಂತ ಒಬ್ಬರು ಧನಿಕರಿದ್ದಾರೆ, ಬುದ್ಧಿವಂತರಿದ್ದಾರೆ, ದಾನ ಶೂರರಿದ್ದಾರೆ. ಅದೇ ರೀತಿಯಲ್ಲಿ ಒಂದ ಕ್ಕಿಂತ ಒಂದು ದೊಡ್ಡದಾನವಿದೆ. ವಸ್ತ್ರ ದಾನಕ್ಕಿಂತ ಜ್ಞಾನದಾನ ಇನ್ನೂ ಶ್ರೇಷ್ಠ. ಆದರೆ ಅಭಯದಾನ ಸರ್ವಶ್ರೇಷ್ಠ ಎಂದು ಕೆಲವರು ಅಭಿಪ್ರಾಯ ಪಡುತ್ತಾರೆ. ಇಂತಹ ವಿಚಾರಗಳಲ್ಲಿ ಅಭಿಪ್ರಾಯ ಭಿನ್ನತೆ ಯಾವಾ ಗಲೂ ಇದ್ದೇ ಇರುತ್ತದೆ. ಹಾಗಾದರೆ ಅತ್ಯಂತ ಶ್ರೇಷ್ಠವಾದುದಾವುದು? ಈ ಪ್ರಶ್ನೆಗೆ ಉತ್ತರ ಹೇಳುವುದು ಕಷ್ಟ. ನಮಗೆ ಕಷ್ಟ ವೆಂದು ತೋರಿದಾಗ, ಸಂದೇಹ ಬಂದಾಗ–ಹಿರಿಯರನ್ನು – ಬಲ್ಲವರನ್ನು – ಕೇಳುವುದು ತಪ್ಪಲ್ಲ

ಮುಚುಕುಂದನೆಂಬ ಹೆಸರಿನ ಒಬ್ಬ ಮಹಾರಾಜನಿದ್ದ, ಆತ ಮಹಾ ಭಕ್ತ. ಅವ ನಿದ್ದ ಕಡೆಗೆ ಹೋಗಿ ಕೃಷ್ಣ, ಮುಕ್ತಿ ಯನ್ನು ಕರುಣಿಸಿದ. ಮುಚುಕುಂದ ಅಷ್ಟು ಹಿರಿಯ. ಆತನಿಗೆ ಒಂದು ದಿನ ಯೋಚನೆ ಬಂತು–ಶರಣಾಗತರನ್ನು ಕಾಪಾಡಿದರೆ ನಮಗೆ ಒರುವ ಫಲವೇನು? ಇವಕ್ಕಾಗಿ ಆತ ಅನೇಕ ಗ್ರಂಥಗಳನ್ನೋದಿದ- ಸರಿಯಾದ ಸಮಾಧಾನ ಸಿಕ್ಕಲಿಲ್ಲ. ಯಾರಾದರೂ ಹಿರಿ ಯರನ್ನು ಕೇಳಬೇಕೆಂದುಕೊಂಡ. ಆ ಅನು ಭವಿಗಳು ಸೂಕ್ತ ಸಮಾಧಾನಹೇಳುತ್ತಾ ರೆಂದು ಭಾವಿಸಿ ಮುಚುಕುಂದ ನೇರವಾಗಿ ಭಗವಾನ್ ಪರಶುರಾಮರ ಆಶ್ರಮಕ್ಕೆ ಬಂದ, ಅದೊಂದು ದೊಡ್ಡ ಕಾಡು. ಪರಶುರಾಮರ ಕೋಪದಷ್ಟೇ ಭ ಯ ಂ ಕ ರ ವಾ ಗಿ ತ್ತು. ಮೂರ್ತೀಭವಿಸಿದ ತಪಃಶಕ್ತಿಯಂತೆ, ಯಜ್ಞ ವೇದಿಕೆಯ ಬಳಿ ಗಂಭೀರವಾಗಿ ಕುಳಿತಿದ್ದ ಆ ಉಗ್ರ ಮೂರ್ತಿಗೆ ಮುಚುಕುಂದ ನಮ್ರ ತೆಯಿಂದ ನಮಸ್ಕರಿಸಿದ. ಮಾನಧನನಾದ ಮಹಾರಾಜ, ತಪೋಧನನಾದ ಪರಶುರಾಮ ಇವರಿಬ್ಬರೂ ಏನು ಮಾತಾಡುವರೋ ಎಂದು ಅಲ್ಲೊಂದು ಪುಟ್ಟ ಜಿಂಕೆ ಪಿಳಿ ಪಿಳಿ ನೋಡುತ್ತಿತ್ತು. ನಾನೂ ಕೇಳಬೇಡವೇ–ಕೇಳಿದರೆ ತಪ್ಪೇನು? ಎನ್ನುವಂತೆ ಆ ಕಡೆ ಯಿಂದ ನವಿಲೊಂದು ಓಲಾಡಿಕೊಂಡು ಮಹರ್ಷಿಗಳ ಹಿಂದೆ ಗರಿಬಿಚ್ಚಿ ನಿಂತಿತ್ತು, ಜ್ಞಾನ ಮೂರ್ತಿಗೆ ಪ್ರಭಾವಳಿ ಇಟ್ಟಂತೆ.

"ಪೂಜ್ಯರಲ್ಲೊಂದು ವಿಜ್ಞಾಪನೆ"

ಮುಚುಕುಂದ ಹೆದರುತ್ತ ಬಿನ್ನವಿಸಿದ.

"ಏನದು?"

ಪರಶುರಾಮರು ಗಂಭೀರವಾಗಿ ಕೇಳಿದರು

"ಶರಣಾಗತರನ್ನು ಕಾ ಪಾ ಡು ವು ದು ಧರ್ಮವೇ?"

"ಅದು ಕೇವಲ ಧರ್ಮವಲ್ಲ–ಪರಮಧರ್ಮ"

"ಅವನು ಶತ್ರುವಾಗಿದ್ದರೆ?"

"ಇವನು ಶತ್ರು ಅವನು ಮಿತ್ರ ಎಂಬ ಭಾವನೆಗಳಿಂದ ಕೂಡಿರುವ ನಿನಗೆ ಧರ್ಮದ ಸ್ವರೂಪ ಹೇಗೆ ತಾನೆ ತಿಳಿದೀತು"!

ಮಹರ್ಷಿಯ ಮಾತುಸ್ವಲ್ಪ ಬಿಸಿ ಏರು ತ್ತಿದೆ–ಎಂದರಿತು ಮುಚುಕುಂದ ಹೇಳಿದ–"ತಮ್ಮಲ್ಲಿ ಚರ್ಚೆಮಾಡಲು ನಾನು ಬಂದಿಲ್ಲ. ತಮ್ಮಿಂದ ತಿಳಿದು ಕೊಳ್ಳಲು ಬಂದಿದ್ದೇನೆ. ಶರಣಾಗತರನ್ನು ಆದರಿಸಿ ಸತ್ಕರಿಸಿದರೆ ನಮಗಾಗುವ ಲಾಭವೇನು?–ಈ ಪ್ರಶ್ನೆಗೆ ಉತ್ತರ ದಯಪಾಲಿಸೋಣವಾಗಬೇಕು."

"ಶರಣಾಗತವಾಗಿ ಬಂದವನೆಂದರೆ, ಕಾರ ಣಾಂತರದಿಂದ ನಮ್ಮ ಆಶ್ರಯಕ್ಕೆ ಬಂದವ ನೆಂದೂ ಅರ್ಥವಾಗುತ್ತದೆ–ಮುಚುಕುಂದ ನಮ್ಮನಾಶ್ರಯಿಸಿ ಬಂದವರನ್ನು ಯಥಾ ಶಕ್ತಿ ಸತ್ಕರಿಸಲೇಬೇಕು. ಅದನ್ನು ಅತಿಥಿ ಸತ್ಕಾರ–ಎನ್ನುತ್ತಾರೆ."

"ಸರಿ ಹಾಗೆ ಮಾಡುವುದರಿಂದ ಲಾಭ ವೇನು?"



"ಸಾಮಾನ್ಯವಾಗಿ ಮನುಷ್ಯರು ಎಲ್ಲದ ರಲ್ಲೂ ಲಾಭವನ್ನೇ ಕಾಣಬಯಸುತ್ತಾರೆ. ಲಾಭನಷ್ಟದ ದೃಷ್ಟಿಯಿಂದಲೇ ಅವರು ಎಲ್ಲ ವನ್ನೂ ಲೆಕ್ಕಹಾಕುತ್ತಾರೆ. ನಿಸ್ವಾರ್ಥ ಭಾವನೆ ಎಂತಹುದು ಎಂಬ ಪಾಠವನ್ನ ವರು ಪ್ರಾಣಿಗಳಿಂದಲೂ ಪಕ್ಷಿಗಳಿಂದಲೂ ಕಲಿಯಬೇಕಾಗುತ್ತದೆ"–ನವಿಲನ್ನು ಜಿಂಕೆ ಯನ್ನೂ ಸವರುತ್ತ ವಾತ್ಸಲ್ಯದಿಂದ ಮಹ ರ್ಷಿಗಳು ಹೇಳಿದರು.

"ಅದು ಹೇಗೆಂದು ಅಪ್ಪಣೆಯಾದರೆ ಮಹಾಕೃಪೆಯಾದೀತು".

"ಸಂತೋಷ ಅಲ್ಲಿನೋಡು–ಆಕಡೆ ದೂರ ದಲ್ಲಿ ವೇಣುವನವೆಂಬ ಕಾಡಿದೆ. ಕೆಲವು ದಿನ ಗಳ ಹಿಂದೆ ಅಲ್ಲೊಂದು ಸಂಗತಿ ನಡೆ ಯಿತು. ಒಬ್ಬ ಬೇಟೆಗಾರ ಬಂದ, ಅವನ ಸ್ವರೂಪ ಭಯಂಕರವಾಗಿತ್ತು. ಸ್ವಭಾವದ ಹೊರರೂಪವೇ ಸ್ವರೂಪ ಅಲ್ಲವೇ ಮುಚು ಕುಂದ?

"ಆಮೇಲೇನಾಯಿತು?"

ಅವನು ವೇಣುವನಕ್ಕೆ ಲಗ್ಗೆ ಹಾಕಿದ ಯಮಧರ್ಮರಾಯನೆಂದುಕೊ!! ಬಲೆ ಬೀಸಿದ

**ವಿದ್ವಾನ್ ಬ. ನ. ಗುಂಡೂರಾವ್**

ಪಕ್ಷಿಗಳನ್ನು ಹಿಡಿದ, ಪ್ರಾಣಿಗಳನ್ನು ಕೊಂದ ಸಂಜೆಯಾಯ್ತು–ಕೊಂದ. ಪ್ರಾಣಿಗಳು ಪಕ್ಷಿಗಳು–ಎಲ್ಲ ಹೊತ್ತು ಕೊಂಡು ಮನೆಗೆ ಹೊರಡಬೇಕೆಂದು ಸಿದ್ಧಮಾಡಿಕೊಂಡ. ಅಷ್ಟರಲ್ಲಿ ಮಳೆ ಪ್ರಾರಂಭವಾಯಿತು. ಮಳೆ ಅಂದರೆ–ಮಹಾರಾಜ...... ನಾನೆಂದೂ ಕಂಡಿರಲಿಲ್ಲ. ಅಷ್ಟು ಭಯಂಕರ. ಕ್ಷಣಾರ್ಧದಲ್ಲಿ ಜಲಪ್ರಳಯವಾದಂತಾಯಿತ್ತು ಅಷ್ಟರಲ್ಲಿ ಅವನು ಕೂತಿದ್ದ ಕಡೆ– ಮರದ ಮೇಲಿನ ಗೂಡಿನಿಂದ ಒಂದು ಹೆಣ್ಣು ಪಾರಿವಾಳ– ಬಿರುಗಾಳಿಯಿಂದಾಗಿ – ಕೆಳಗೆಬಿತ್ತು. ಬೇಟೆಗಾರ ಅದನ್ನೂ ತನ್ನ ಬುಟ್ಟಿಗೆ ಹಾಕಿಕೊಂಡ.

"ಉದುರಿ ಬಿದ್ದ ಪಾರಿಳಾಳ ಬದುಕಿತ್ತೆ?"

ಬದುಕಿತ್ತು ಮಹಾರಾಜ, ಗಂಡು ಪಾರಿವಾಳದ ಗೋಳಾಟದಿಂದಾಗಿ ಬೇಟೆಗಾರನಿಗೆ ರಾತ್ರಿ ನಿದ್ದೆ ಬರಲಿಲ್ಲ–ಹೊಸಜಾಗ–ಚಳಿ–ಮಳೆ. ನೋಡು ಮುಚುಕುಂದ–ಪ್ರಾಣಿಯಾದರೇನು? ಮಮತೆ ಪ್ರೀತಿ ಅದಕ್ಕೂ ಅರ್ಥವಾಗುತ್ತದೆ. ಅದೂ ಅಲ್ಲದೆ ಮನೆತುಂಬ ಮಕ್ಕಳುಮರಿ ತುಂಬಿದ್ದರೇನು–ಬಂಧು ಬಳಗ ತುಂಬಿದ್ದರೇನು? ಗೃಹಸ್ಥನಿಗೆ ಪತ್ನಿ ಇಲ್ಲದಾಗ ಮನೆಯೇ ಶೂನ್ಯ. ಗೃಹಿಣಿಯಿದ್ದರೆ ಗೃಹ. ಗೃಹಿಣಿಯೇ ಗೃಹ. ಗಂಡು ಪಾರಿವಾಳದ ಗೋಳಾಟ ಬೇಟೆಗಾರನ ಬುಟ್ಟಿಯಲ್ಲಿದ್ದ ಹೆಣ್ಣು ಹಕ್ಕಿಗೆ ಕೇಳಿಸಿತು.

"ಅದೇನೂ ಮಾರುತ್ತರ ಹೇಳಲಿಲ್ಲವೇ?"



ಹೇಳಿತು, ಕೇಳಿದವರ ಮನಸ್ಸು ಕರಗುವಂತಹ ಮಾತನ್ನು ಹೇಳಿತು. ಮರದ ಬುಡದಲ್ಲಿ ಚಳಿಗೆ ನಡುಗುತ್ತ ಕುಳಿತಿರುವ ಬೇಟೆಗಾರನಿಗೆ ಸಹಾಯ ಮಾಡೆಂದು ಅದು ತನ್ನ ಗಂಡನಿಗೆ ಹೇಳಿತು.

"ಸೆರೆ ಹಿಡಿದ ಪಾಪಿಗೆ ಸಹಾಯವೇ?"

ಹೌದು ಮಹಾರಾಜ, ಅದನ್ನೆ ಕರುಣೆ ಎನ್ನುವುದು. ಪತ್ನಿಯ ಸಲಹೆಯಂತೆ ಆ ಗಂಡು ಪಾರಿವಾಳ ಧೈರ್ಯವಾಗಿ ಕೆಳಗಿಳಿದು ಬಂತು. ಬೇಟೆಗಾರ ಇನ್ನೊಂದು ಬೆಪ್ಪು ತಾನಾಗಿ ಬುಟ್ಟಿಗೆ ಬೀಳುತ್ತಿದೆಯೆಂದು ಹಿಗ್ಗಿದ. ಕಪೋತ ವ್ಯಾಧನಿಗೆ ನಮಸ್ಕಾರ ಮಾಡಿತು "ತಮಗೆ ನಾನೇನು ಮಾಡಲಿ" – ಎಂದು ಕೇಳಿತು. ಬೇಟೆಗಾರ ಚಕಿತನಾಗಿ ನೊಡಿದ. ಅವನಿಗೇನು ತೋಚಿತೊ– ಅದನ್ನು ಹಿಡಿಯಲಿಲ್ಲ, 'ತುಂಬ ಚಳಿಯಾಗುತ್ತಿದೆ. ಇದನ್ನು ನಿವಾರಿಸಿದರೆ ಮಹೋಪಕಾರವಾದೀತೆಂದ' ಪಾರಿವಾಳ ಅಲ್ಲಲ್ಲಿ ಬಿದ್ದಿದ್ದ ಕಡ್ಡಿ ಕಸ ತರಗೆಲೆ ತಂದುರಾಶಿ ಹಾಕಿತು. ತನ್ನಲ್ಲಿದ್ದ ಚಕ್ಕು ಮುಕ್ಕಿ ಕಲ್ಲಿನಿಂದ ವ್ಯಾಧ ಬೆಂಕಿ ಮೈಕಾಯಿಸಿ ಕೊಂಡ. ಸ್ವಲ್ಪ ಚೇತರಿಸಿಕೊಂಡಂತಾಯ್ತು, ಇನ್ನೇನು ಸೇವೆ ಮಾಡಲಿ ಎಂದಾಗ ಬೇಟೆಗಾರ ನಿಸ್ಸಂಕೋಚವಾಗಿ ಹೇಳಿದ–ನನಗೆ ಆಹಾರ ಬೇಕಾಗಿದೆ.

ಈಗ ಪಾರಿವಾಳಕ್ಕೆ ತುಂಬ ಯೋಚನೆಯಾಯ್ತು ಹಕಿಗಳು ಅಲ್ಲಲ್ಲಿ ಕಾಳುಕಡ್ಡಿ ಆರಿಸಿಕೊಂಡು ತಿನ್ನುತ್ತವೆ. ಮಾನವರಂತೆ ಸಂಗ್ರಹಮನೋಭಾವ ಹಕ್ಕಿಗಳಿಗಿರುವುದಿಲ್ಲ. ಆದರೆ ಅತಿಥಿ ಬಾಯಿಬಿಟ್ಟು ಆಹಾರ ಕೇಳಿದಾಗ ನೀಡದೇ ಇರುವುದು ಧರ್ಮವಲ್ಲ. ಪಾರಿವಾಳಕ್ಕೆ ಕೊನೆಗೊಂರು ವಿಚಾರ ಹೊಳೆಯಿತು. ಧಗಧಗನೆ ಉರಿಯುತ್ತಿದ್ದ ಬೆಂಕಿಯಕಡೆ ಒಂದು ಸಲ ನೊಡಿತು, ಬುಟ್ಟಿಯಲ್ಲಿ ಬಿದ್ದಿದ್ದ ಪತ್ನಿಯನ್ನೊಂದು ಸಲ ನೋಡಿತು.

"ನಾನೇ ಬೆಂಕಿಯಲ್ಲಿ ಬೀಳುತ್ತೇನೆ. ಬೆಂದು ಹೋಗುತ್ತೇನೆ. ಮಾನವರಿಗೆ ಬೆಂದ ಪಕ್ಷಿಗಳ ಮಾಂಸ ಬಹುರುಚಿಯಂತೆ ನನ್ನನ್ನು ತಾವು ತಿಂದುಬಿಡಿ. ಅತಿಥಿಸೇವಾಭಾಗ್ಯ ದೊರಕಿಸಿ ಕೊಟ್ಟಿರಿ, ನಾನು ಧನ್ಯನಾದೆ".

ಹಕ್ಕಿ ಹೇಳಿತು. ಬೇಟೆಗಾರ ಈ ಮಾತು ಕೇಳಿ ದಿಗ್ಭ್ರಾಂತನಾದ, ಕಟುಕನಿಗೆ ತನ್ನನ್ನು ತಾನೇ ಆಹಾರವಾಗಿ ಅರ್ಪಿಸುವ ಪುಟ್ಟಪಕ್ಷಿಯ ಔದಾರ್ಯ ಕಂಡು ಬೆರಗಾದ. ಅಷ್ಟರಲ್ಲಿ ಪಾರಿವಾಳ ಬೆಂಕಿಗೆ ಹಾರಿತು. ಕ್ಷಣಾರ್ಧದಲ್ಲಿ ಬೆಂದು ಹೋಯ್ತು. ಇದೆಲ್ಲ ನೋಡಿ ಬೇಟೆಗಾರನ ಮನಸ್ಸು ಕಸಿವಿಸಿಯಾಯ್ತು. ತಾನೇ ತಾನಾಗಿ ಕಣ್ಣೀರು ಬಂತು ಬುಟ್ಟಿಯಲ್ಲಿದ್ದ ಹೆಣ್ಣು ಪಾರಿವಾಳವನ್ನು ಈಚೆಗೆ ಬಿಟ್ಟು ತನ್ನ ಆಯುಧಗಳು–ಬಲೆಮುಂತಾದ ಬೇಟೆಯ ಉಪಕರಣಗಳನ್ನೆಲ್ಲ ಬೆಂಕಿಗೆ ಹಾಕಿದ. ಬೆಂದು ಬಿದ್ದ ಪಾರಿವಾಳವನ್ನೇ ದಿಟ್ಟಿಸಿನೋಡುತ್ತ ಕುಳಿತ. ಅಷ್ಟರಲ್ಲಿ ಬಿಡುಗಡೆ ಹೊಂದಿದ ಹೆಣ್ಣು ಹಕ್ಕಿ ಬೇಟೆಗಾರನಿಗೆ ನಮಸ್ಕರಿಸಿ ಅದೇ ಬೆಂಕಿಗೆ ಹಾರಿತು. ಈ ಘೋರ ಸನ್ನಿವೇಶ ನೋಡಿ ಬೇಟೆಗಾರನಿಗೆ ಪಶ್ಚಾತ್ತಾಪವಾಯ್ತು. ಎಷ್ಟು ಪಾಪಕೃತ್ಯಮಾಡಿದೆ ಎಂದು ಕರುಳಿರಿಯುವಂತೆ ಸಂಕಟವಾಯ್ತು. ಅವನೂ ಅದೇ ಬೆಂಕಿಗೆ ಹಾರಿದ–ಎಂದು ಹೇಳುತ್ತ ಪರಶುರಾಮರು ಉತ್ತರೀಯದಿಂದ ಕಣ್ಣೊರೆಸಿಕೊಂಡರು. ಹಂತಕನಿಗೂ ಹಿತವನ್ನೆಸಗಲು ಅಸುತ್ತೆತ್ತ ಹಕ್ಕಿಗಳು ಪುಣ್ಯಲೋಕವನ್ನೂ ಪಡೆದವು. ಮುಚುಕುಂದನ ಸಂದೇಹವೆಲ್ಲ ನಿವಾರಣೆಯಾಯ್ತು, ಅಷ್ಟೇ ಅಲ್ಲ. ಇದೊಂದು ಪುಣ್ಯಕಥೆ – ದಿವ್ಯಕಥೆ– ಕೇಳಿ ಧನ್ಯನಾದೆ– ಎಂಬ ಸಂತಸ ಆತನನ್ನು ಪುಲಕಿತನಾಗಿ ಮಾಡಿತು. ಪರಶುರಾಮನಿಗೆ ನಮಸ್ಕರಿಸಿದ. ಆಗ ಆತನ ಕಣ್ಣೀರಧಾರೆ ಮಹರ್ಷಿಯ ಪಾದಗಳ ಮೇಲೆ ಬಿತ್ತು. ಇಬ್ಬರೂ ಕ್ಷಣಕಾಲ ಮೌನವಾಗಿದ್ದರು. ವಿಹಗದಂಪತಿಗಳ ಔದಾರ್ಯ–ತ್ಯಾಗ ಅವರ ಮುಂದೆ ಚಲಚ್ಚಿತ್ರದಂತೆ ಸುಳಿದು ಹೋಯ್ತು.



(8ನೇ ಪುಟದಿಂದ)

ದ್ರದಿಂದ ದಾಟಿಸುವುದರಿಂದಲೇ ಅದು ತಾರಕ ನಾಮ. ಆದುದರಿಂದಲೇ ಪುರಂದರ ದಾಸರು,

ರಾಮನಾಮವ ಜಪಿಸೋ ಹೇ ಮನುಜ ।
ಆ ಮಂತ್ರ ಈ ಮಂತ್ರ ಜಪಿಸಿ ನೀ ಕೆಡಬೇಡ ।
ಸೋಮಶೇಖರ ತನ್ನ ಭಾಮೆಗೆ ಹೇಳಿದ
ಮಂತ್ರ ॥

ಎಂದು ರಾಮನನ್ನು ಕೊಂಡಾಡಿದ್ದಾರೆ. ಅಲ್ಲದೆ

"ರಾಮರಾಮೆನ್ನಿರೊ ನರಜನ್ಮ ಸ್ಥಿರವಲ್ಲ..."
"ರಾಮನಾಮ ಪಾಯಸಕ್ಕೆ ಕೃಷ್ಣನಾಮ
ಸಕ್ಕರೆ..."

"ರಾಮ ಎಂಬ ಎರಡು ಅಕ್ಷರದ
ಮಹಿಮೆಯನ್ನು
ಪಾಮರರು ತಾವೇನು ಬಲ್ಲರಯ್ಯ..."

"ರಾಮನಾಮವ ನುಡಿ ನುಡಿ ।
ಕಾಮಕ್ರೋಧಗಳ ಬಿಡಿ ಬಿಡಿ..."

"ನೀನ್ಯಾಕೋ ನಿನ್ನ ಹಂಗ್ಯಾಕೊ ।
ನಿನ್ನ ನಾಮದ ಬಲವೊಂದಿದ್ದರೆ ಸಾಕೋ..."

ಎಂದು ಮುಂತಾಗಿ ದಾಸವರೇಣ್ಯರು ರಾಮನಾಮವನ್ನು ಹೊಗಳಿದ್ದಾರೆ.

"ಹರಣ ಹಿಂಗದ ಮುನ್ನ ಶ್ರೀಹರಿಯ ಜಪಿಸಿ ಸುಖಿಯಾಗು ಮನವೇ..." ಎಂದು ಭಕ್ತ ಕನಕ ದಾಸರು ಪ್ರಾರ್ಥಿಸಿದ್ದಾರೆ.

ರಾಮನಾಮದ ಜಪದ ಹಿರಿಮೆಯ ಬಗ್ಗೆ ಜೈಮಿನಿ ಭಾರತದಲ್ಲಿ ಕುಶಲವರ ಸನ್ನಿವೇಶ ಉಲ್ಲೇಖನೀಯ. ಲಕ್ಷ್ಮಣ, ಭರತ, ಶತ್ರುಘ್ನರೇ ಆದಿಯಾಗಿ ರಾಮನ ಚತುರಂಗ ಸೈನ್ಯವನ್ನೂ ಹಸುಳೆಗಳಾದ ಕುಶಲವರು ಮೂರ್ಛಾಕ್ರಾಂತರನ್ನಾಗಿಸಿದಾಗ ಸಾಕ್ಷಾತ್ ಶ್ರೀ ರಾಮಚಂದ್ರನೇ ರಣರಂಗಕ್ಕೆ ಬರಬೇಕಾಗಿ ಬಂತು. ಬಂದು ವಿಸ್ಮಿತನಾಗಿ ಆ ಯಮಳರನ್ನು ಕುರಿತು, "ಎಮ್ಮ ಸೇನೆಯಂ ಜಯಿಸುವೀ ಬಲಂ ಏತರಿಂದಾದುದು ?" ಎಂದು ಪ್ರಶ್ನಿಸುತ್ತಾನೆ. ಅದಕ್ಕೆ ಕುಶನು ಹೀಗೆ ಉತ್ತರಿಸುತ್ತಾನೆ.

"ರಾಮಚಾರಿತ್ರ್ಯ ಪಠನಾಭ್ಯಾಸ ಯೋಗದಿಂ
ಕ್ಷೇಮಂ ಸುಪುಷ್ಟಿ ನಿಶ್ಚಲಮತಿ ನಿರಾಲಸ್ಯ
ಮೀ ಮಹಾಸೈನ್ಯಮಂ ಗೆಲ್ವದಟು
ತಮಗಾದುದು"

ರಾಮನಾಮ ಜಪದ ಮಹಿಮೆಯಿಂದ ಅವರಿಗೆ ಆಯುರಾರೋಗ್ಯ, ನಿರ್ಮಲಚಿತ್ತ, ನಿರಾಲಸ್ಯ ಹಾಗೂ ರಾಮನ ಸೈನ್ಯಸಾಗರವನ್ನು ಗೆಲ್ಲುವ ಶಕ್ತಿಯುಂಟಾಯಿತೆಂದು ಕುಶನು ತಿಳಿಸುತ್ತಾನೆ.

ಇಷ್ಟೇ ಅಲ್ಲದೆ ರಾಮಾಯಣದಲ್ಲಿಯೂ ಸಹ ಇಂತಹ ಒಂದು ಘಟನೆ ಇದೆ. ಲಂಕೆಗೆ ಸೇತುವೆಯನ್ನು ಕಟ್ಟುವಾಗ ಕಪಿವೀರರು ಬಂಡೆಗಳನ್ನು ಹೊತ್ತುತಂದು ಅದರ ಮೇಲೆ 'ರಾಮ' ಎಂಬ ಎರಡಕ್ಷರವನ್ನು ಬರೆದು ನೀರಿಗೆ ಹಾಕುತ್ತಿದ್ದರು. ಶ್ರೀರಾಮನಾಮದ 'ಲಲಿತಜಪ'ದ ಮಹಿಮೆಯಿಂದ ಆ ಬಂಡೆಗಳು ತೇಲುತ್ತಿದ್ದವು. ಇಲ್ಲದಿದ್ದರೆ ಸಮುದ್ರಕ್ಕೆ ಸೇತುವೆಯನ್ನು ಕಟ್ಟಲು ಸಾಧ್ಯವಾಗುತ್ತಿತ್ತೇ !

೩. ತ್ರ್ಯಕ್ಷರೀ : ಇದು ಮೂರಕ್ಷರದ ಮಂತ್ರ. ಇಲ್ಲಿ ರಾಮನಾಮಕ್ಕೆ ಶ್ರೀಕಾರವನ್ನು ಸೇರಿಸುವುದು, ಇಲ್ಲವೇ ಜೈಕಾರವನ್ನು ಸೇರಿಸುವುದು- 'ಶ್ರೀರಾಮ' ಅಥವಾ 'ಜೈರಾಮ'.

೪. ಪಂಚಾಕ್ಷರೀ : ಐದು ಅಕ್ಷರಗಳನ್ನೊಳಗೊಂಡ ಮಂತ್ರವೇ 'ಪಂಚಾಕ್ಷರೀ ಮಹಾಮಂತ್ರ' ಉದಾಹರಣೆಗೆ 'ನಮಃ ಶಿವಾಯ' ಇದನ್ನು ಶಿವ ಪಂಚಾಕ್ಷರೀ ಮಹಾಮಂತ್ರವೆಂದು ಕರೆಯುತ್ತಾರೆ.

೫. ಷಡಕ್ಷರೀ : ಆರಕ್ಷರಗಳಿಂದ ಕೂಡಿದ ಮಂತ್ರವೇ ಷಡಕ್ಷರೀ. ಶಿವಪಂಚಾಕ್ಷರಿಗೆ ಓಂಕಾರವನ್ನು ಸೇರಿಸಿದರೆ ಅದು ಷಡಕ್ಷರೀ ಮಂತ್ರವಾಗುತ್ತದೆ. "ಓಂ ನಮಃಶಿವಾಯ" ಅಥವಾ "ಓಂ ಶಿವಾಯ ನಮಃ" ಇಲ್ಲವೇ 'ಶಿವಾಯ ನಮಃ ಓಂ'

ಮಾತೆಯನ್ನು ಜಪಿಸಬೇಕೆನ್ನುವವರು 'ಹ್ರೀಂ ನಮಃಶಿವಾಯೈ' ಎಂಬ ಗೌರೀಮಂತ್ರವನ್ನು ಪುನಶ್ಚರಣೆ ಮಾಡಬಹುದು. ಸಾಮಾನ್ಯವಾಗಿ ಸ್ತ್ರೀಯರು ಇದನ್ನು ಜಪಿಸುತ್ತಾರೆ. ಅಂದರೆ ಪುರುಷರು ಜಪಿಸಬಾರದೆಂದಲ್ಲ. ಯಾವ ಮಂತ್ರವನ್ನು ಯಾರು ಬೇಕಾದರೂ ಜಪಿಸಬಹುದು. ಇಲ್ಲಿ "ಹ್ರೀಂ" ಎಂಬುದು ಮೂಲಮಂತ್ರವು. ಹ್ರೀಂಕಾರ ಸ್ವರೂಪಳಾದ ಶಿವೆಗೆ ನಮಸ್ಕಾರವೆಂದು ಇದರ ಅರ್ಥ. ಮೂಲಮಂತ್ರವಾದ 'ಹ್ರೀಂ' ಎಂಬ ಒಂದು ಅಕ್ಷರದ ಅರ್ಥವು ಪರಬ್ರಹ್ಮ ಸ್ವರೂಪಿಣಿಯಾಗಿರುವ ಶ್ರೀದೇವಿಯ ಸಚ್ಚಿದಾನಂದ ಸ್ವರೂಪವನ್ನೂ, ಈಶ್ವರನ ಪತ್ನಿಯಾಗಿಯೂ ಜಗತ್ತಿನ ಸೃಷ್ಟಿಸ್ಥಿತಿಲಯಗಳಿಗೆ ಪ್ರಭುವಾಗಿಯೂ ಇರುವ ಈಶ್ವರೀ ಸ್ವರೂಪವನ್ನೂ, ಹ್ರೀಂಕಾರವೇ ಬ್ರಹ್ಮಾಂಡವಾಗಿರುತ್ತೆಂಬುದನ್ನೂ ಪ್ರತಿಪಾದಿಸುವುದು. ಆದುದರಿಂದ ಪರಬ್ರಹ್ಮ ಸ್ವರೂಪಿಣಿಯೂ, ಈಶ್ವರೀ ಸ್ವರೂಪಿಣಿಯೂ ಆದ ಶಿವೆಗೆ ನಮಸ್ಕಾರವೆಂಬುದೇ 'ಹ್ರೀಂ ನಮಃಶಿವಾಯೈ' ಎಂಬ ಮಂತ್ರಾರ್ಥ.

೬. ಅಷ್ಟಾಕ್ಷರೀ : ಎಂಟು ಅಕ್ಷರಸಂಜ್ಞೆಯನ್ನುಳ್ಳ ಮಂತ್ರವೇ 'ಅಷ್ಟಾಕ್ಷರೀ', 'ಓಂ ನಮೋ ನಾರಾಯಣಾಯ' ಎಂಬುದು ಅಂತಹ ಒಂದು ಮಂತ್ರ. ಒಂದೊಂದು ವಿಭಾಗದಲ್ಲಿ ಒಂದೊಂದೇ ದೇವತೆಯ ಮಂತ್ರವನ್ನು ಕೇವಲ ಉದಾಹರಣಾರ್ಥವಾಗಿ ಕೊಡುತ್ತಿರುವುದರಿಂದ ಆ ವಿಭಾಗದಲ್ಲಿ ಅಷ್ಟೇ ಮಂತ್ರ ಎಂದು ಯಾರೂ ತಪ್ಪಾಗಿ ಎಣಿಸಬಾರದು. ಅಷ್ಟಾಕ್ಷರೀಮಂತ್ರವು ಇನ್ನೂ ಹಲವಾರು ಇವೆ. ಅವುಗಳಲ್ಲಿ ಅತಿಪ್ರಸಿದ್ಧವಾದ ಒಂದನ್ನು ಮಾತ್ರ ಇಲ್ಲಿ ನಿದರ್ಶನಕ್ಕಾಗಿ ಕೊಟ್ಟಿದೆ.

೭. ದಶಾಕ್ಷರೀ : ಹತ್ತು ಅಕ್ಷರಗಳಿಂದ ಕೂಡಿದ ಮಂತ್ರವೇ 'ದಶಾಕ್ಷರೀ' ಮಂತ್ರ, "ಓಂ ನಮೋ ಭಗವತೇ ರುದ್ರಾಯ" – ಇದು ಶಿವಪರವಾದ ಮಂತ್ರ.

೮. ದ್ವಾದಶಾಕ್ಷರೀ : ಹನ್ನೆರಡು ಅಕ್ಷರಗಳಿಂದ ಕೂಡಿದ ಮಂತ್ರವೇ 'ದ್ವಾದಶಾಕ್ಷರೀಮಂತ್ರ'.

"ಓಂ ನಮೋ ಭಗವತೇ ವಾಸುದೇವಾಯ"
ಅಥವಾ
"ಶ್ರೀ ಲಲಿತಾತ್ರಿಪುರಸುಂದರ್ಯೈ ನಮಃ"
ಇತ್ಯಾದಿ.

೯. ತ್ರಯೋದಶಾಕ್ಷರೀ : ಹದಿಮೂರು ಅಕ್ಷರ ಸಂಜ್ಞೆಯನ್ನುಳ್ಳ ಮಂತ್ರವೇ 'ತ್ರಯೋದಶಾಕ್ಷರೀ ಮಂತ್ರ'. ಉದಾಹರಣಾರ್ಥವಾಗಿ "ಓಂಶ್ರೀ ಲಲಿತಾ ತ್ರಿಪುರಸುಂದರ್ಯೈನಮಃ" ಹಿಂದಿನ ದ್ವಾದಶಾಕ್ಷರಮಂತ್ರಕ್ಕೆ ಇಲ್ಲಿ ಓಂಕಾರವನ್ನು ಸೇರಿಸಿದೆ.

೧೦. ಪಂಚದಶಾಕ್ಷರೀ : ಹದಿನೈದು ಅಕ್ಷರಗಳಿಂದ ಕೂಡಿದ ಮಂತ್ರವೇ 'ಪಂಚದಶಾಕ್ಷರೀ ಮಂತ್ರ'. ಈ ಮಂತ್ರವು ಶ್ರೀ ಹಯಗ್ರೀವಾವತಾರವನ್ನೆತ್ತಿದ್ದ ಶ್ರೀ ಮಹಾವಿಷ್ಣುವು ಅಗಸ್ತ್ಯ ಮಹರ್ಷಿಗಳಿಗೆ ಉಪದೇಶಮಾಡಿ ಪರಂಪರೆಯಾಗಿ ಬಂದ ಮಂತ್ರವಾಗಿದೆ.

"ಕ, ಏ, ಈ, ಲ, ಹ್ರೀಂ, ಹ, ಸ, ಕ, ಹ, ಲ, ಹ್ರೀಂ, ಸ, ಕ, ಲ, ಹ್ರೀಂ" ಎಂಬುದು ಶ್ರೀ ಲಲಿತಾಪಂಚದಶಾಕ್ಷರೀ ಮಂತ್ರವು. ಇಲ್ಲಿ ಹನ್ನೆರಡು ಅಕ್ಷರಗಳೂ ಮೂರು ಹ್ರೀಂಕಾರಗಳೂ ಇವೆ. ಮಂತ್ರವು ಅಕ್ಷರಗಳ ಸಂಯೋಗದಿಂದುಂಟಾಗುವ ಪದಗಳನ್ನೊಳಗೊಂಡಿಲ್ಲ. ಆದುದರಿಂದ ಪದಗಳ ಅರ್ಥಗಳ ಮೂಲಕ ಮಂತ್ರದ ಮಹಿಮೆಯನ್ನರಿಯಲು ಸಾಧ್ಯವಿಲ್ಲ. ಮಂತ್ರದಲ್ಲಿರುವ ಪ್ರತ್ಯೇಕ ಪ್ರತ್ಯೇಕವಾದ ಅಕ್ಷರಗಳ ಶಕ್ತಿಯಿಂದಲೇ ಮಂತ್ರದ ಮಹಿಮೆಯನ್ನು ತಿಳಿಯಬೇಕಾಗಿದೆ. ಅಕ್ಷರ ಶಕ್ತಿಗಳು,

"ನಕ್ಷರತೀತ್ಯಕ್ಷರಂ"

ಎಂಬಂತೆ ನಾಶರಹಿತವುಳ್ಳವುಗಳಾಗಿ ಸೃಷ್ಟಿಸ್ಥಿತಿ ಲಯಗಳ ಅನೇಕ ವಿಧವಾದ ನಾದಬ್ರಹ್ಮದ ಕಾರ್ಯಗಳಿಗೆ ಕಾರಣಗಳಾಗಿವೆ. ಯಾವಯಾವ ಅಕ್ಷರಗಳು ಯಾವಯಾವ ಸಂದರ್ಭಗಳಲ್ಲಿ ಎಂತೆಂತಹ ಕಾರ್ಯಗಳಿಗೆ ಕಾರಣಗಳಾಗಿವೆಯೋ ಅವುಗಳನ್ನರಿಯಲು ಶ್ರುತಿ ಪ್ರಮಾಣ ಮತ್ತು ಮಹಾತ್ಮರ ವಚನಗಳನ್ನೇ ಆಧಾರವಾಗಿ ತೆಗೆದುಕೊಳ್ಳಬೇಕಲ್ಲದೆ ಅನ್ಯಥಾ ಸಾಧ್ಯವಿಲ್ಲ.

೧೧. ಚತುರ್ವಿಂಶತ್ಯಕ್ಷರೀ : ಇಪ್ಪತ್ನಾಲ್ಕು ಅಕ್ಷರಗಳಿಂದ ಕೂಡಿದ ಮಂತ್ರವೇ 'ಚತುರ್ವಿಂಶತ್ಯಕ್ಷರೀ ಮಹಾಮಂತ್ರ'ವು. ಇದೇ 'ಶ್ರೀ ಗಾಯತ್ರೀ ಮಂತ್ರ'. ಗಾಯತ್ರಿಯು ಋಗ್ವೇದ (೩–೬೨–೧೦)ರಲ್ಲಿ ಬರುವ ಸವಿತೃದೇವತಾತ್ಮಕವಾದ ಒಂದು ಮಂತ್ರ. ವಿಶ್ವಾಮಿತ್ರ ಋಷಿಯು ಈ ಮಂತ್ರದ ದ್ರಷ್ಟಾರ. ಈ ಮಂತ್ರಕ್ಕೆ 'ಗಾಯತ್ರೀ' ಎಂಬ ಹೆಸರು ಬರಲು ಅದು ಪ್ರತಿ ಪಾದದಲ್ಲಿಯೂ ಎಂಟು ಅಕ್ಷರಗಳುಳ್ಳ ಮೂರು ಪಾದಗಳಿಂದ ಕೂಡಿದ 'ಗಾಯತ್ರೀ' ಎಂಬ ಛಂದಸ್ಸಿನಲ್ಲಿರುವುದೇ ಕಾರಣ. ಋಗ್ವೇದದಲ್ಲಿ ನೂರಾರು ಗಾಯತ್ರೀ ಛಂದಸ್ಸಿನ ಮಂತ್ರಗಳಿರುತ್ತವೆ. ನ್ಯಾಯವಾಗಿ ನಾವು ಅವುಗಳೆಲ್ಲವನ್ನೂ 'ಗಾಯತ್ರೀ' ಎಂಬುದಾಗಿಯೇ ಕರೆಯಬೇಕು. ಆದರೆ ಅದರ ಗಂಭೀರವಾದ ಅರ್ಥವ್ಯಾಪ್ತಿಯ ದೆಸೆಯಿಂದ ಮತ್ತು ಜನಪ್ರಿಯತೆಯ ಕಾರಣದಿಂದ 'ಗಾಯತ್ರೀಃ' ಎಂಬ ಪದವು ವಿಶ್ವಾಮಿತ್ರ ಋಷಿಯು ಕಂಡ,

ತತ್ಸವಿತುರ್ವರೇಣ್ಯಂ
ಭರ್ಗೋ ದೇವಸ್ಯ ಧೀಮಹಿ ।
ಧಿಯೋ ಯೋ ನಃ ಪ್ರಚೋದಯಾತ್ ॥

ಎಂಬ ಮಂತ್ರಕ್ಕೆ ಮಾತ್ರ ಪರಿಮಿತವಾಗಿದೆ. ಅಷ್ಟೇ ಅಲ್ಲದೆ ಕಾಲಾಂತರದಲ್ಲಿ ಅದನ್ನು 'ಗಾಯತ್ರೀ' ಎಂದು ಕರೆಯಲು ಅನೇಕ ಹೊಸ ಕಾರಣಗಳು ಕೊಡಲ್ಪಟ್ಟಿವೆ.

"ಗಾಯಂತಂ ತ್ರಾಯತೇ ಯಸ್ಮಾತ್
ಗಾಯತ್ರೀತಿ ಸ್ಮೃತಾ ತತಃ ।"

ಯಾವನು ಅದನ್ನು ಗಾನ ಮಾಡುತ್ತಾನೆಯೋ ಅಥವಾ ಜಪಿಸುತ್ತಾನೆಯೋ ಅವನನ್ನು ಕಾಪಾಡುವುದರಿಂದ ಅದು ಗಾಯತ್ರಿ ಎನಿಸಿಕೊಳ್ಳುತ್ತದೆ.

"ಪ್ರಾಣಾಗಯಾ ಇತಿ ಪ್ರೋಕ್ತಾಃ
ತ್ರಾಯತೇ ತಾ ನಥಾಪಿ ವಾ ॥"

ಪ್ರಾಣಗಳು 'ಗಯಾ' ಎಂದು ಕರೆಯಲ್ಪಡುತ್ತವೆ. ಅವುಗಳನ್ನು ಕಾಪಾಡುವುದರಿಂದ ಅದಕ್ಕೆ ಆ ಹೆಸರು ಬಂದಿರುತ್ತದೆ.

"ಗಾಯತ್ರೀತಿ, ಭವೇನ್ನಾಮ
ಕೇವಲಂ ತ್ರಾಯತೀತಿ ವಾ ।"

'ಗಾಯತ್ರಿ' ಎಂಬುದಕ್ಕೆ ಕಾಪಾಡುವವಳು ಎಂದರ್ಥ.

ವ್ಯಾಸಕೇತ್ರಾಣ ಜಿಹ್ವಾಸು
ಸದಾ ವಾಗ್ರಸ ವರ್ತನಾತ್ ।
ಸರಸ್ವತೀತಿ ನಾಮ್ನಾ ಚ
ಸಮಾಖ್ಯಾತಾ ಮಹರ್ಷಿಭಿಃ ॥

ಅಂದರೆ ನಾಲಗೆಯಲ್ಲಿ ಸದಾ ವಾಗ್ರಸವನ್ನುಂಟು ಮಾಡುತ್ತಾ ಅದರಲ್ಲಿ ನೆಲೆಸಿರುವುದರಿಂದ ಈ ಗಾಯತ್ರಿಯನ್ನೇ ಮಹರ್ಷಿಗಳು "ಸರಸ್ವತೀ" ಎಂದು ಕರೆದಿರುತ್ತಾರೆ. ಗಾಯತ್ರಿಯು ಮೂರು ವೇದಗಳ ಸಾರವನ್ನೆತ್ತಿ ಮಾಡಲ್ಪಟ್ಟಿದೆಯೆಂಬ ನಂಬಿಕೆಯು ಗಾಯತ್ರೀಮಂತ್ರಕ್ಕೆ ಅನನ್ಯ ಸಾಧಾರಣವಾದ ಮಾನ್ಯತೆಯನ್ನು ದೊರಕಿಸಿಕೊಟ್ಟಿರುತ್ತದೆ. ಆದುದರಿಂದಲೇ ಪರಂಪರೆಯ ಪ್ರಕಾರ ಸಕ್ರಮವಾಗಿ ಗಾಯತ್ರಿಯ ಉಪದೇಶವಾಗದವನಿಗೆ ವೇದಾಧ್ಯಯನ ಮಾಡುವ ಅಧಿಕಾರವಿಲ್ಲ. ಅದರ ಮೂಲಕವೇ ಒಬ್ಬ ವ್ಯಕ್ತಿಯು ಪವಿತ್ರವಾದ ವೇದ ಸಾಹಿತ್ಯಗಳಿಗೆ ಪ್ರವೇಶ ಮಾಡುತ್ತಾನೆ.

ಬಹಳ ಹಿಂದಿನಿಂದ ಈ ಗಾಯತ್ರೀ ಮಂತ್ರವು ಸಂಧ್ಯಾಕಾಲಗಳ ಜಪಕ್ಕೆ ವಿಷಯವಾಗಿರುತ್ತದೆ. ಮನುವು ಆ ಬಗ್ಗೆ ಈ ರೀತಿ ಹೇಳುತ್ತಾನೆ.

# ಗಾಯತ್ರಿ

ಏತದಕ್ಷರಂ ಏತಾಂ ಚ
ಜಪನ್ ವ್ಯಾಹೃತಿ ಪೂರ್ವಿಕಾಂ ।
ಸಂಧ್ಯಯೋರ್ವೇದ ವಿದ್ವಿಪ್ರೋ
ವೇದಪುಣ್ಯೇನ ಯುಜ್ಯತೇ ॥

ಅಂದರೆ "ಪ್ರಣವ ಮಂತ್ರವನ್ನೂ ಮತ್ತು ವ್ಯಾಹೃತಿಗಳಿಂದ ಆರಭಿಸಿ ಗಾಯತ್ರೀಮಂತ್ರವನ್ನು ವೇದವಿತ್ತಾದ ವಿಪ್ರನು ಸಂಧ್ಯಾಕಾಲಗಳಲ್ಲಿ ಜಪಿಸುವುದರಿಂದ ವೇದಗಳನ್ನು ಹೇಳಿದ ಪುಣ್ಯವನ್ನು ಹೊಂದುತ್ತಾನೆ". ಅವನೇ ಮತ್ತೊಂದು ಶ್ಲೋಕದಲ್ಲಿ,

ಓಂಕಾರಪೂರ್ವಿಕಾಸ್ತಿಸ್ರೋ
ಮಹಾವ್ಯಾಹೃತಯೋಽವ್ಯಯಾಃ ।
ತ್ರೀ ಪದಾ ಚೈವ ಸಾವಿತ್ರೀ
ವಿಜ್ಞೇಯಂ ಬ್ರಹ್ಮಣೋ ಮುಖಂ ॥

ಅಂದರೆ ಓಂಕಾರಪೂರ್ವಕವಾದ ಮೂರು ಶಾಶ್ವತವಾದ ವ್ಯಾಹೃತಿಗಳೂ (ಭೂಃ, ಭುವಃ, ಸುವಃ) ಮತ್ತು ಮೂರು ಪಾದಗಳಿಂದ ಕೂಡಿದ ಸಾವಿತ್ರಿಯೂ ಪರಮಾತ್ಮ ಪ್ರಾಪ್ತಿಯ ದ್ವಾರ ಎಂಬುದಾಗಿ ಹೇಳುವುದರ ಮೂಲಕ ಅದು ಪರಿಪೂರ್ಣವಾದ ಬ್ರಹ್ಮಜ್ಞಾನವನ್ನು ಹೊಂದಲು ಶ್ರೇಷ್ಠವಾದ ಸಾಧನವೆಂಬುದನ್ನು ಒತ್ತಿ ಹೇಳಿದ್ದಾನೆ.

ಮುಂದೆ ಬಂದ ತತ್ತ್ವಜ್ಞಾನಿಗಳು ಗಾಯತ್ರಿಯ ೨೪ ಅಕ್ಷರಗಳಲ್ಲಿ ಸೃಷ್ಟಿಕಾರಣವಾದ ೨೪ ತತ್ತ್ವಗಳ ಸಮಾವೇಶವನ್ನು ನೋಡಿರುತ್ತಾರೆ. ಅದನ್ನೇ ಯೋಗಿಗಳು ತಮ್ಮ ಭಾಷೆಯಲ್ಲಿ ವಿವರಿಸುತ್ತಾ ಪ್ರಾಣಧಾರಿಣಿಯಾದ ಗಾಯತ್ರಿಯು ಕುಂಡಲಿನೀ ಶಕ್ತಿಯೇ ಸರಿ; ತತ್ತ್ವಸ್ವರೂಪಳಾದ ಗಾಯತ್ರಿಯು ಕುಂಡಲಿನಿಯಿಂದಲೇ ಹುಟ್ಟಿರುತ್ತಾಳೆ ಎಂದು ಹೇಳಿದ್ದಾರೆ.

ಕುಂಡಲಿನ್ಯಾಂ ಸಮುದ್ಭೂತಾ
ಗಾಯತ್ರೀ ಪ್ರಾಣಧಾರಿಣೀ ॥

– ಎಂಬುದಾಗಿ ಘೋಷಿಸಿರುತ್ತಾರೆ.

ಗಾಯತ್ರೀ ಜಪದಿಂದ ಮನುಷ್ಯನು ತೊಳೆದುಕೊಳ್ಳಲಾಗದ ಪಾಪವೇ ಇಲ್ಲ, ಎಂಬುದಾಗಿ ಧರ್ಮಶಾಸ್ತ್ರಕಾರರೆಲ್ಲರೂ ಒಮ್ಮತದಿಂದ ನುಡಿಯುತ್ತಾರೆ. ದೊಡ್ಡ ಮತ್ತು ಸಣ್ಣ ಪಾಪಗಳೆಲ್ಲಕ್ಕೂ ಗಾಯತ್ರೀ ಜಪವನ್ನು ಅವರು ಪ್ರಾಯಶ್ಚಿತ್ತವಾಗಿ ವಿಧಿಸಿರುವುದು ಕಂಡುಬರುತ್ತದೆ.

ಗಾಯತ್ರೀಮಂತ್ರವು ಮನುಷ್ಯನನ್ನು ಉನ್ನತವಾದ ಸ್ಥಿತಿಯಲ್ಲಿರಿಸುವ ಶಕ್ತಿ. ಅದನ್ನು ಬಿಟ್ಟ ದ್ವಿಜನು ತತ್ಕಾಲದಲ್ಲಿಯೇ ಪತನ ಹೊಂದುತ್ತಾನೆ. ಅದನ್ನು ಬಿಡದೆ ಅವಲಂಬಿಸಿದವನು ತನ್ನ ಜೀವನವನ್ನು ಅವಶ್ಯವಾಗಿ ಉತ್ಕೃಷ್ಟವಾಗಿಸಿಕೊಳ್ಳುತ್ತಾನೆ, ಎಂಬ ನಂಬಿಕೆಯು ಸಹಸ್ರಾರು ವರ್ಷಗಳಿಂದ ನಮ್ಮ ದೇಶದಲ್ಲಿ ನಿರಂತರವಾಗಿ ನಡೆದುಬಂದಿರುತ್ತದೆ. ಆದುದರಿಂದಲೇ ಒಂದು ಕಾಲವೂ ಸಹ ಗಾಯತ್ರೀ ಜಪ ಪ್ರಧಾನವಾದ ಸಂಧ್ಯಾವಂದನೆಯನ್ನು ಬಿಡಲು ವಿಪ್ರರಾದವರು ಅಳುಕುತ್ತಿದ್ದರು. ಒಂದು ವೇಳೆ ಆಲಸ್ಯದಿಂದ ಒಬ್ಬರಿಗೆ ಸಂಧ್ಯಾವಂದನೆ ಮಾಡಲಾಗದಿದ್ದರೆ ಅವರಿಗೋಸ್ಕರ ಬೇರೊಬ್ಬರು ಸಂಧ್ಯಾವಂದನೆ ಮಾಡುತ್ತಿದ್ದರು. ಇದರಿಂದ ಗಾಯತ್ರೀ ಜಪದ ಮಹಿಮೆಯು ಸುವೇದ್ಯ.

ಜಪದಿಂದುಂಟಾಗುವ ಲಾಭ: ಮಂತ್ರಸಿದ್ಧರ ಶಕ್ತಿಯಿಂದ ವಿಧಿವತ್ತಾಗಿ ಉಪದೇಶ ಪಡೆದ ಸಾಧಕರಿಗೆ ಸಿದ್ಧಿಯುಂಟಾಗುತ್ತದೆ. ಈ ಮಂತ್ರ ಜಪವು ವಿಶ್ವದಲ್ಲಿರುವ ವಿವಿಧ ದೇವತಾ ಮತ್ತು ಅನೇಕ ಯಕ್ಷ, ರಾಕ್ಷಸ, ಭೂತ, ಪ್ರೇತ, ಪಿಶಾಚಿ, ಶಾಕಿನಿ, ಢಾಕಿನಿ, ಹಾಕಿನೀ, ಮೋಹಿನೀ, ಭೇತಾಳ ಮುಂತಾದವುಗಳನ್ನೂ ಕುರಿತಾಗಿದೆ. ಉನ್ನತ ಮಟ್ಟದ ಜಪದಿಂದ ಮನಸ್ಸಿನ ಕಲ್ಮಶಗಳು ದೂರವಾಗಿ, ಪಾಪ ಪರಿಹಾರವಾಗಿ ಸಾಧಕನಿಗೆ ದೈವ ಸಾಕ್ಷಾತ್ಕಾರವುಂಟಾಗುತ್ತದೆ ಜಪದಿಂದ ಸ್ಪಂದನವಾಗಿ ಆಧ್ಯಾತ್ಮಶಕ್ತಿ ಬೆಳೆದ ಆತ್ಮೋನ್ನತಿಯಾಗುತ್ತದೆ. ಜಪದ ಪರಿಣಾಮವನ್ನು ಬುದ್ಧಿ ಬಲದಿಂದಾಗಲೀ, ತರ್ಕದಿಂದಾಗಲೀ 'ಇದ ಮಿತ್ಥಂ' ಎಂದು ಸ್ಥಾಪಿಸಲು ಸಾಧ್ಯವಿಲ್ಲ ಶ್ರದ್ಧಾ ಭಕ್ತಿಗಳಿಂದ ಅನುಷ್ಠಿಸಿದರೆ ಮಾತ್ರ ಅನುಭವವೇದ್ಯ. ★

# ಕರ್ನಾಟಕದ ಪ್ರಾಚೀನ ವಿದ್ಯಾಕೇಂದ್ರಗಳು

ಡಾ॥ ಕೆ. ಜಿ. ವಸಂತ ಮಾಧವ

ಕರ್ನಾಟಕದಲ್ಲಿ ಸಿಕ್ಕಿರುವ ಶಾಸನಗಳು ಈ ನಾಡಿನಲ್ಲಿ ನಡೆದ ವಿದ್ಯಾಭ್ಯಾಸದ ವಿವರಗಳನ್ನು ತಿಳಿಸುತ್ತವೆ. ವಿದ್ಯಾದಾನಕ್ಕೆ ಅರಸರು, ವಿದ್ವಾಂಸರು, ಮತ್ತು ಸಾಮಾನ್ಯ ಶ್ರೀಮಂತಜನರುಪ್ರೋತ್ಸಾಹವನ್ನಿತ್ತು ವಿದ್ಯಾಕೇಂದ್ರಗಳನ್ನು ಸ್ಥಾಪಿಸುತ್ತಿದ್ದರು. ಈ ವಿದ್ಯಾಕೇಂದ್ರಗಳು ತಪೋವನ, ದೇವಸ್ಥಾನ, ಬ್ರಹ್ಮಪುರಿ, ಅಗ್ರಹಾರ ಘಟಿಕಾಸ್ಥಾನಗಳಾಗಿದ್ದುವು. ಈ ವಿದ್ಯಾಕೇಂದ್ರಗಳಿಗೆ ರಾಜಾಶ್ರಯ ಆಗಿಂದಾಗ್ಗೆ ಸಿಗುತ್ತಿದ್ದು ವಿದ್ವಾಂಸರನ್ನೂ ಮತ್ತು ವಿದ್ಯಾರ್ಥಿಗಳನ್ನು ಆಕರ್ಷಿಸುತ್ತಿದ್ದವು.

ತಪೋವನಗಳು ವಿದ್ಯಾಭ್ಯಾಸ ಕೇಂದ್ರಗಳಾಗಿದ್ದುವೆಂದು ಕೆಲವು ಶಾಸನಗಳು ತಿಳಿಸುತ್ತವೆ. ಇಂತಹ ತಪೋವನಗಳಲ್ಲಿ ಕಾರ್ತಿಕೇಯ ಮುಖ್ಯವಾದದ್ದು. ಇದು ಇದ್ದುದ್ದು ತುಡತಿನಿ ಮತ್ತು ಕೊಳಗಲ್ಲು ಗ್ರಾಮಗಳಲ್ಲಿ. (ಬಳ್ಳಾರಿ ಸಮೀಪದ ಊರುಗಳು) (ಕ್ರಿ. ಶ. 964) ಈ ತಪೋವನ ರಾಷ್ಟ್ರಕೂಟರ ಕೊನೆಗಾಲದಲ್ಲಿ ದಂಡಾಸಾನಿಗದಾ ಧರನೆನ್ನುವ ಬಂಗಾಳದೇಶದ ಯತಿಯಿಂದ ಸ್ಥಾಪಿತವಾಯಿತು. ಈತನೇ ವಿದ್ಯಾದಾನಕ್ಕೆ ಒಂದು ಸತ್ರವನ್ನು ನಿರ್ಮಾಣ ಮಾಡಿದನು.

ಕರ್ನಾಟಕದ ಹಲವು ದೇವಸ್ಥಾನಗಳು ವಿದ್ಯಾಕೇಂದ್ರಗಳಾಗಿದ್ದವು. ಈ ವಿದ್ಯಾಕೇಂದ್ರವಾಗಿದ್ದ ದೇವಾಲಯುಗಳಿಗೆ ರಾಜರು ದಾನ ಮಾಡುತ್ತಿದ್ದರು. ಎಲ್ಲಾ ದಾನಶಾಸನಗಳನ್ನು ವಿಮರ್ಶಿಸಿದಾಗ ತರಗತಿಗಳು ದೇವಸ್ಥಾನದಲ್ಲಿ ನಡೆಯುತ್ತಿದ್ದವೆಂದು ತಿಳಿಯುವುದು. ಕ್ರಿ. ಶ. 8ನೇ ಶತಮಾನದ ನಂತರ ಕೆಲವು ದೇವಸ್ಥಾನಗಳು ವಿದ್ಯಾಕೇಂದ್ರಗಳಾಗಿ ಪರಿವರ್ತನೆಗೊಂಡವು.

ಇಂತಹ ದೇವಸ್ಥಾನಗಳಲ್ಲಿ ಹರಿಹರದ (ಚಿತ್ರದುರ್ಗ ಜಿಲ್ಲೆ) ಹರಿಹರ ದೇವಸ್ಥಾನ ಪ್ರಮುಖ ವಿದ್ಯಾಕೇಂದ್ರವಾಗಿತ್ತು. ಇಲ್ಲಿ ಪಂಡಿತರು ಋಗ್ವೇದ, ಯಜುರ್ವೇದ, ವ್ಯಾಕರಣ, ಮಿಮಾಂಸೆ. ಮತ್ತು ಅಕ್ಷರ ಶಿಕ್ಷೆಗಳನ್ನು ಕಲಿಸುತ್ತಿದ್ದರು. ತಾಳಗುಂದದ (ಚಿತ್ರದುರ್ಗ) ಪ್ರಣವೇಶ್ವರ ದೇವಸ್ಥಾನ ಇನ್ನೊಂದು ವಿದ್ಯಾಕೇಂದ್ರ. ಇಲ್ಲಿ ವೇದಗಳಲ್ಲದೇ ಪದಪಾಠ, ಕಲ್ಪರೂಪಾವತಾರ, ನ್ಯಾಸಗಳನ್ನೊಳಗೊಂಡ ಶಬ್ದಶಾಸ್ತ್ರ ವೇದಾಂತಗಳ ಅಧ್ಯಯನ ಮತ್ತು ಅಧ್ಯಾಪನ ನಡೆಯುತ್ತಿದ್ದಿತೆಂದು ಕ್ರಿ. ಶ. 1151 ರ ಶಾಸನದಿಂದ ತಿಳಿದುಬರುತ್ತದೆ. ದೇವಸ್ಥಾನಗಳಲ್ಲಿ ಅಧ್ಯಯನ ಮಾಡುತಿದ್ದ ಜನರ ತಿಳುವಳಿಕೆಯನ್ನು ಹೆಚ್ಚಿಸಿ ಮನೋರಂಜನೆಗೆಂದು ಉತ್ಸವ ಕಥಾಕಾಲಕ್ಷೇಪಗಳನ್ನು ಒದಗಿಸಲು ಪ್ರಯತ್ನಿಸುತ್ತಿದ್ದವು. ನಗರಗಳಲ್ಲಿರುವ ವಿದ್ವಾಂಸರ ಕೇಂದ್ರವೇ ಬ್ರಹ್ಮಪುರಿ. ಇಂತಹ ಒಂದು ಬ್ರಹ್ಮಪುರಿಯನ್ನು ಬನವಾಸಿಯ ದಂಡನಾಯಕ ಕೇಶವ ದೇವನು ಬಳ್ಳಿಗಾವೆಯಲ್ಲಿ ಸ್ಥಾಪಿಸಿದನು. ಇದರಲ್ಲಿ 38 ಜನ ಬ್ರಾಹ್ಮಣರು ಸ್ಮೃತಿ, ಕಾವ್ಯ, ನಾಟಕಗಳಲ್ಲಿ, ಭಾಷ್ಯ ಮಂಜರಿಯಲ್ಲಿಯೂ ಪರಿಣತರಿದ್ದರು. ಸೂಡಿ, ವಿಕ್ರಮಪುರ, ಅಣ್ಣಿಗೇರಿ ಕಲ್ಬುರ್ಗಿ ನಮ್ಮ ನಾಡಿನ ಪ್ರಮುಖ ಬ್ರಹ್ಮಪುರಿಗಳು.

ವಿದ್ಯಾರ್ಥಿಗಳು ಎರಡು ರೀತಿಯವರು. ಒಂದನೇ ವರ್ಗದವರು ವಿದ್ಯಾರ್ಥಿ ತಪೋಧರರು. ಎರಡನೇವರ್ಗದ ವಿದ್ಯಾರ್ಥಿ ಮಾಣಿಯರು. ಒಂದನೇ ವರ್ಗದವರು ಆ ದೇವಸ್ಥಾನದ ಯತಿಗಳ ಸಂಪ್ರದಾಯಕ್ಕೆ ಸೇರಿದವರು. ಅವರು ಅಜೀವ ಪರ್ಯಂತ ಬ್ರಹ್ಮಚಾರಿಗಳಾಗಿ ಉಳಿದು ತಮ್ಮ ಅಧ್ಯಯನ ಮುಗಿದ ಮೇಲೆ ಬೇರೆ ಬೇರೆ ಮಠಗಳಲ್ಲಿ ಸ್ಥಾನಪತಿಗಳಾಗುತ್ತಿದ್ದರು. ಇವರ ಏಕೈಕಗುರಿ ಜ್ಞಾನಾರ್ಜನೆ. ಕ್ರಿ. ಶ. 1058ರ ಶಾಸನದಂತೆ ಇವರು ಕರ್ತವ್ಯಭ್ರಷ್ಟರಾದರೆ ಇವರನ್ನು ಪದಚ್ಯುತಿ ಮಾಡುತ್ತಿದ್ದರು. ವಿದ್ಯಾರ್ಥಿಮಾಣಿಗಳು ಆ ಮಠದಲ್ಲಿ ಓದಿ, ಅಧ್ಯಯನ ಮುಗಿದನಂತರ ಗೃಹಸ್ಥರಾಗುತ್ತಿದ್ದರು. ಹೆಚ್ಚಾಗಿ ದೇವಸ್ಥಾನಗಳು

ಅಗ್ರಹಾರಗಳು ಕ್ರಿ. ಶ. 5 ಶತಮಾನದ ನಂತರ ವಿದ್ಯಾಕೇಂದ್ರಗಳಾಗಿ ಬೆಳಕಿಗೆ ಬಂದವು. ಇವುಗಳು ವಿದ್ವಾಂಸರ ಅಧ್ಯಯನ ಸ್ಥಾನಗಳು. ಒಂದು ಊರನ್ನು ಅಗ್ರಹಾರವಾಗಿ ಮಾಡಿ ಅದನ್ನು ವಿದ್ವಾಂಸರಿಗೆ ದಾನಮಾಡಿದರೆ ಪುಣ್ಯ ಬರುತ್ತದೆ ಎಂದು ಕರ್ನಾಟಕದ ಅರಸರು ತಿಳಿದಿದ್ದರು. ಇದರಿಂದಾಗಿ ಕರ್ನಾಟಕದ ಅರಸರ ಪ್ರೋತ್ಸಾಹದಿಂದಾಗಿ ಹಲವಾರು ಅಗ್ರಹಾರಗಳು ಕನ್ನಡ ನಾಡಿನ ಅಲ್ಲಲ್ಲಿ ಬೆಳಕಿಗೆ ಬಂದವು. ಇಲ್ಲಿ ವಿದ್ವಾಂಸರು ಅಧ್ಯಯನವನ್ನೂ ಮತ್ತು ಅಧ್ಯಾಪನವನ್ನು ನಡೆಸುತ್ತಿದ್ದರು. ಅಗ್ರಹಾರದ ವಿದ್ವಾಂಸರು ಸಕಲ ಶಾಸ್ತ್ರ ಪರಿಣತರಾಗಿದ್ದರು. ಕ್ರಿ. ಶ. 1057 ರ ಶಾಸನವು ಹೊಸವಡಂಗಿಲೆ ಅಗ್ರಹಾರವು ವೇದನಾದದಿಂದ

ತುಂಬಿ ಹೋಗಿದೆ ಮತ್ತು ಅಲ್ಲಿ ಅಧ್ಯಯನ ಮತ್ತು ಅಧ್ಯಾಪನ ನಡೆಯುತ್ತಿದೆ ಎಂದು ಬಣ್ಣಿಸಿದೆ. ಕ್ರಿ.ಶ. 1091 ರ ಶಾಸನದಂತೆ ತಾಳಗುಂದ ಅಗ್ರಹಾರದ ಬ್ರಾಹ್ಮಣರು ವೇದ, ವೇದಾಂಗ, ಷಟ್‌ತರ್ಕ, ಮೀಮಾಂಸೆ, ಪುರಾಣ ಮತ್ತು ನಾಟಕಗಳಲ್ಲಿ ಪರಿಣಿತರಾಗಿದ್ದರು. ಐಹೊಳೆ ಅಗ್ರಹಾರ ವಾಗಿದ್ದು ಇಲ್ಲಿ ಚತುರ್ವೇದಿಗಳ ಸಮುದಾಯ ವಿದ್ದಿತ್ತು. ಕೋಟಿ, ಉಮಚಿ (ಗದಗಿನ ಹತ್ತಿರ) ಅಗ್ರಹಾರ ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ಆರಂಭವಾಯಿತು. ಈ ಅಗ್ರಹಾ ರದ ಉಪಾಧ್ಯಾಯರು ವ್ಯಾಸ ಮತ್ತು ಪ್ರಭಾ ಕರ ಗ್ರಂಥಗಳನ್ನು ಕಲಿಸುತ್ತಿದ್ದರು. ಅಕ್ಕ ರಿಗನೆಂಬ ಇನ್ನೊಬ್ಬ ಉಪಾಧ್ಯಾಯನು ಗಣಿತ, ಜ್ಯೋತಿಷ್ಯ, ಛಂದಸ್ಸು, ಅಲಂಕಾರ ಕಲಿಸುವುದಲ್ಲದೇ ಅವುಗಳ ಮೇಲೆ ಪುಸ್ತಕ ಗಳನ್ನು ಬರೆಯಬಲ್ಲವನಾಗಿದ್ದನು. ಜೊತೆಗೆ ವ್ಯಾಕರಣದಲ್ಲೂ ತಜ್ಞನಾಗಿದ್ದನು. ಕುಂದ ಗೋಳ, ಹೊಟ್ಟೂರು, ಪವಣೂರು, ಲಕ್ಕುಂಡಿ, ಲಕ್ಷ್ಮೇಶ್ವರ, ಸಾಲೂರು ಇತ್ಯಾದಿ ಪ್ರಮುಖ ಅಗ್ರಹಾರಗಳು.

ಘಟಿಕ ಸ್ಥಾನಗಳು ವಿದ್ಯಾಕೇಂದ್ರಗಳಾ ಗಿದ್ದವು. ಇಲ್ಲಿ ಉಚ್ಚ ಶಿಕ್ಷಣ ಶಿಖರ ಪ್ರಾಯ ವಾಗಿತ್ತು. ಕುಂತಳ, ಕಾಡಿಯೂರು, (ಧಾರವಾಡಜಿಲ್ಲೆ) ಮೊರಿಗೆರೆ (ಬಳ್ಳಾರಿಜಿಲ್ಲೆ), ನಾಗಾಯಿ, (ಗುಲಬರ್ಗ) ರಾಯಬಾಗ (ಬೆಳ ಗಾಂವ) ಕಡಲೆವಾಡ ಪ್ರಮುಖ ಘಟಿಕ ಸ್ಥಾನಗಳಾಗಿದ್ದವು. ಆದರೆ ಅವು ಎಂತಹ ವಿದ್ಯಾಕೇಂದ್ರಗಳು ಮತ್ತು ಅಲ್ಲಿ ನಡೆಯು ತ್ತಿದ್ದ ವಿದ್ಯಾಭ್ಯಾಸ ಯಾವ ರೀತಿ ಇತ್ತು ಎಂಬ ವಿಷಯಗಳಲ್ಲಿ ವಿದ್ವಾಂಸರೊಳಗೆ ಭಿನ್ನಾಭಿಪ್ರಾಯವಿದೆ, ಪ್ರೊಫೆಸರ್ ಎಸ್.ವಿ. ವೆಂಕಟೇಶರವರ ಅಭಿಪ್ರಾಯದಂತೆ ಉಪಾ ಧ್ಯಾಯರೂ ವಿದ್ಯಾರ್ಥಿಗಳೂ ಕೂಡಿ ಚರ್ಚೆ ನಡೆಸುತ್ತಿದ್ದರು ಮತ್ತು ಮಹಾ ವಿದ್ವಾಂಸರ ಸಂಪರ್ಕದಿಂದ ಧಾರ್ಮಿಕ ಸಾಹಿತ್ಯದಲ್ಲಿ ಅತ್ಯುತ್ತಮಜ್ಞಾನವನ್ನು ಪಡೆಯಲು ಸಾಧ್ಯವಾಗಿದ್ದ ಶ್ರೇಷ್ಠತಮ ಸಂಸ್ಥೆಯೇ ಘಟಿಕಸ್ಥಾನ. ಈ ಘಟಿಕೆಯಲ್ಲಿ ಎಲ್ಲಾ ಕಾರ್ಯಕ್ರಮಗಳು ವೇಳೆಗೆ ಸರಿಯಾಗಿ ನಡೆ ಯುತ್ತಿದ್ದವು. ವೇಳಾಪತ್ರಿಕೆಯಂತೆ ಕೆಲಸ ಕಾರ್ಯಗಳು ನಡೆಯುತ್ತವೆಯೆಂದು ನೋಡ ಲಿಕ್ಕೆ ಮೇಲಧಿಕಾರಿಗಳಿದ್ದರೆಂದು ಡಾ|| ದೀಕ್ಷಿತ ಅಭಿಪ್ರಾಯಪಡುತ್ತಾರೆ. ಘಟಿಕ ಸ್ಥಾನದ ವಿದ್ಯಾಭ್ಯಾಸ ಮಟ್ಟ ಎಷ್ಟು ದೊಡ್ಡ ದಾಗಿತ್ತೆಂದರೆ ಅಧ್ಯಯನವನ್ನೆಲ್ಲಾ ಮುಗಿ ಸಿದ ವಿದ್ವಾಂಸರು ಕೂಡಾ ವಿನಯದಿಂದ ಆ ಸಂಸ್ಥೆಯನ್ನು ಸಮೀಪಿಸಿ ಜ್ಞಾನದ ತುಣುಕುಗಳನ್ನು ಆರಿಸಿಕೊಳ್ಳಬೇಕಿತ್ತು, ಈ ಘಟಿಕಸ್ಥಾನದಲ್ಲಿ ವಿದ್ವಾಂಸರ ಚರ್ಚೆಗಳು, ವಾದವಿವಾದಗಳು ನಡೆಯುತ್ತಿದ್ದವು. ಘಟಿಕ ಸ್ಥಾನದಲ್ಲಿ ಮನ್ನಣೆ ಪಡೆದವನು ವಿದ್ವತ್ತಿನ ಶಿಖರವನ್ನು ತಲ್ಪಿದವನೆಂದು ಜನರು ಭಾವಿ ಸುತ್ತಿದ್ದರು.

ಇಷ್ಟಲ್ಲದೇ ಆಗಿನ ಕಾಲದಲ್ಲಿ ಎರಡು ಪ್ರಮುಖ ವಿದ್ಯಾಕೇಂದ್ರಗಳಿದ್ದಿದ್ದವು. ಅವು ಗಳಲ್ಲಿ ಮೊದಲನೆಯದು ಸಾಲಯೋಗಿ ವಿದ್ಯಾಶಾಲೆ. ಇದು ಈಗಿನ ಬಿಜಾಪುರ ಜಿಲ್ಲೆಯಲ್ಲಿದೆ. ಈ ವಿದ್ಯಾಶಾಲೆ ಕ್ರಿ.ಶ. 945ರ ಸಮಯದಲ್ಲಿ ಸ್ಥಾಪಿತವಾಯಿತು. ಇದರ ಸ್ಥಾಪಕ ರಾಷ್ಟ್ರಕೂಟ ಚಕ್ರವರ್ತಿ ಕೃಷ್ಣನ ಪ್ರಧಾನಿ ನಾರಾಯಣನು. ಇಲ್ಲಿಯ ಸಂಸ್ಕೃತಶಾಲೆಯಲ್ಲಿ ಅಧ್ಯಯನ ಮಾಡಲು ದೇಶದ ಎಲ್ಲೆಡೆಗಳಿಂದಲೂ ವಿದ್ಯಾರ್ಥಿಗಳು ಬರುತ್ತಿದ್ದರು. ಅಲ್ಲಿ ಅಧ್ಯಯನ ಮಾಡುವ ವಿದ್ಯಾರ್ಥಿಗಳ ವಾಸಕ್ಕೆ ಇಪ್ಪತ್ತೇಳು ವಾಸ ಗೃಹಗಳು ಇದ್ದವು. ಊರಿನಲ್ಲಿ ನಡೆಯುವ ಮದುವೆ ಮುಂಜಿಗಳಲ್ಲಿ ಜನರು ನಿರ್ದಿಷ್ಟ ಪಡಿಸಿದ ಹಣವನ್ನು ಈ ಶಾಲೆಗೆ ಕೊಡ ಬೇಕಾಗಿತ್ತು. ಕೇದಾರೇಶ್ವರ ಇನ್ನೊಂದು ಪ್ರಮುಖ ವಿದ್ಯಾಕೇಂದ್ರ. ಇದು ಈಗಿನ ಶಿವ ಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲೋಕಿನಲ್ಲಿದೆ ಇದನ್ನೇ ಕೋಡಿಯಮಠವೆನ್ನುತ್ತಾರೆ. ಈ ವಿದ್ಯಾಲಯವನ್ನು 1054 ರಿಂದ 1094ರ ಮಧ್ಯ ಕಾಲದಲ್ಲಿ ಸ್ಥಾಪಿಸಿರಬೇಕು. ಕೇದಾರೇಶ್ವರನು ಈ ವಿದ್ಯಾಲಯದ ಪ್ರಥಮ ಪ್ರಾಚಾರ್ಯನು. ಈ ವಿದ್ಯಾಲಯದ ಗುರುಗಳು ಬಹು ದೊಡ್ಡ ವಿದ್ವಾಂಸರಾಗಿದ್ದುದರಿಂದ ಇದು ಶ್ರೇಷ್ಠ ವಿಶ್ವವಿದ್ಯಾಲಯವಾಗಿ ಪರಿಣಮಿಸಿತು. ಈ ವಿಶ್ವವಿದ್ಯಾಲಯದಲ್ಲಿ ಶ್ರೀಕಂಠ ಪಂಡಿತ, ಸೋಮೇಶ್ವರ ಮತ್ತು ಎರಡನೇ ವಾಮಶಕ್ತಿ ಗಳೆಂಬ ಶ್ರೇಷ್ಠ ವಿದ್ವಾಂಸರುಗಳಿದ್ದರು. ಸೋಮೇಶ್ವರನೆಂಬ ಪ್ರಾಚಾರ್ಯನನ್ನು ವಿದ್ಯಾಬ್ಧಿ ಎಂದು ಶಾಸನಗಳು ಕರೆದಿವೆ ಯಲ್ಲದೆ, ಆತನ ಉಪನ್ಯಾಸ, ವಾಗ್ ವೈಖ ರಿಯು ದೇವನದಿಯ ಪ್ರವಾಹದಂತಿದೆ ಎಂದು ಬಣ್ಣಿಸಿವೆ. ಇವನ ವಿದ್ವತ್‌ಪ್ರಭಾವದಿಂದ ಇಲ್ಲಿ ವಿದ್ಯಾರ್ಥಿ ಸಮೂಹವು ವರ್ಧಿಸಿತು. ಇಲ್ಲಿಯ ಇನ್ನೊಬ್ಬ ಪ್ರಾಚಾರ್ಯ ವಾಮ ದೇವ ಅದ್ಭುತ ವಿದ್ವಾಂಸನಾಗಿದ್ದು ಬಹು ಮುಖವಾದ ವ್ಯಕ್ತಿತ್ವವನ್ನು ಬೆಳೆಸಿ ಕೊಂಡಿದ್ದನು. ಇವನು 40 ವರ್ಷ ಈ ವಿದ್ಯಾ ಪೀಠದಲ್ಲಿ ಪ್ರಾಚಾರ್ಯನಾಗಿದ್ದು ಈ ವಿದ್ಯಾಲಯವನ್ನು ಕೀರ್ತಿಶಿಖರಕ್ಕೆ ಏರಿ ಸಿದನು. ಇವನ ವ್ಯಕ್ತಿತ್ವಪ್ರಭಾವದಿಂದ ಇಲ್ಲಿ ವಿದ್ಯಾರ್ಥಿ ಸಮೂಹವು ವರ್ಧಿಸಿತು. ಈ ವಿದ್ವಾಂಸರ ವಿದ್ವತ್ತಿನ ಪ್ರಭಾವದಿಂದಾಗಿ ನಾನಾಭಾಗಗಳಿಂದ ವಿದ್ಯಾರ್ಥಿಗಳು ಈ ವಿಶ್ವ ವಿದ್ಯಾಲಯಕ್ಕೆ ಬರುತ್ತಿದ್ದರು. ಇಲ್ಲಿ ವ್ಯಾಕರಣ, ವೇದ, ಷಟ್‌ದರ್ಶನ, ಯೋಗ ಶಾಸ್ತ್ರ, ಪುರಾಣ ಮತ್ತು ನಾಟಕಗಳ ಅಧ್ಯಯನ ನಡೆಯುತ್ತಿತ್ತು. ಒಟ್ಟಿನಲ್ಲಿ ಈ ವಿಶ್ವವಿದ್ಯಾಲಯ ಎಲ್ಲಾ ಪ್ರಕಾರದ ವಿದ್ಯೆಗೆ ಆಗರವಾಗಿತ್ತು. ಇಷ್ಟಲ್ಲದೆ ಈ ವಿಶ್ವ ವಿದ್ಯಾಲಯದ ಪ್ರವೇಶ ಕ್ಷಪಣಕ ಜೈನ, ಬೌದ್ಧ ಅನುಯಾಯಿಗಳಿಗೆ ತೆರೆದಿತ್ತೆಂ ಬುದು ಗಮನಾರ್ಹವಾಗಿದೆ.

ಕನ್ನಡನಾಡಿನ ವಿದ್ಯಾಸಂಸ್ಥೆಗಳಲ್ಲಿ ಶಿಸ್ತಿಗೆ ಬಹಳ ಪ್ರಾಧಾನ್ಯವಿದ್ದಿತೆಂದು ಶಾಸನಗಳು ತಿಳಿಸುತ್ತವೆ. ಎರಡು ಬಗೆಯ ಶಿಸ್ತನ್ನು ನಾವಿಲ್ಲಿ ಕಾಣಬಹುದುದಾಗಿದೆ. ಮೊದಲನೆ ಯದು; ಅಭ್ಯಾಸಕ್ರಮದಲ್ಲಿ ಹೆಚ್ಚು ಕಡಿಮೆ ಯಾಗದಂತೆ ನೋಡಿಕೊಳ್ಳುವುದು. ಇನ್ನೊಂದು ಬ್ರಹ್ಮಚರ್ಯವನ್ನು ಕಾಪಾಡಿ ಕೊಳ್ಳುವುದು. ಈ ಎರಡುಶಿಸ್ತನ್ನು ಉಲ್ಲಂಘಿ ಸಿದರೆ ವಿದ್ಯಾರ್ಥಿಗಳನ್ನು ಮಠದಿಂದ ಹೊರಗೆ ಕಳುಹಿಸುತ್ತಿದ್ದರು.

ಪ್ರಾಚೀನ ಕನ್ನಡನಾಡಿನಲ್ಲಿ ಹಲವಾರು ವಿದ್ಯಾಸಂಸ್ಥೆಗಳಿದ್ದು ಜನರಲ್ಲಿ ವಿದ್ಯಾಸಕ್ತಿ ಯನ್ನು ಕೆರಳಿಸಿದವು. ಈ ವಿದ್ಯಾಸಂಸ್ಥೆ ಗಳಲ್ಲಿ ಗುರು ಶಿಷ್ಯರ ಸಂಬಂಧ ಉತ್ತಮ ವಿದ್ದು ಜ್ಞಾನಾರ್ಜನೆ ಮತ್ತು ಜ್ಞಾನಾಪನೆ ಗಳು ಸರಾಗವಾಗಿ ನಡೆದವು. ಕನ್ನಡ ನಾಡಿನ ಅರಸರು ಮತ್ತು ಅವರ ಕೆಳಗಿನ ಅಧಿಕಾರಿಗಳು ಅಗ್ರಹಾರ ಸ್ಥಾಪಿಸಿ ವಿದ್ಯಾ ಕೇಂದ್ರಗಳಿಗೆ ಪ್ರೋತ್ಸಾಹವನ್ನಿತ್ತು ಕನ್ನಡ ನಾಡಿನಲ್ಲಿ ಜ್ಞಾನಜ್ಯೋತಿಯನ್ನು ಬೆಳಗಿಸಿದರು. (ಸಾಧಾರ) ★

# ಶ್ರೀ ವೆಂಕಟೇಶ್ವರಸ್ವಾಮಿಯವರ ದೇವಸ್ಥಾನ, ತಿರುಮಲೆ.

## ವಿವಿಧ ಆರ್ಜಿತ ಉತ್ಸವಗಳ ದರ ವಿವರಣೆ

| | |
|---|---|
| ವಿಶೇಷ ಪ್ರವೇಶ<br>(ಸರ್ವದರ್ಶನ ಸಮಯದಲ್ಲಿ ಮಹಾದ್ವಾರದ ಬಳಿಯಲ್ಲಿ ಸರತಿಯಸಾಲಿನಲ್ಲಿ ಸೇರುವಿಕೆ) | ರೂ 25–00 |
| ಸುಪ್ರಭಾತ | ರೂ 25–00 |

### ಸೇವೆಗಳು

| | | |
|---|---|---|
| 1. | ಆಮಂತ್ರಣೋತ್ಸವ[1] | ರೂ 400 |
| 2. | ಅಭಿಷೇಕ* | ರೂ 500 |
| 3. | ಪುನುಗು* | ರೂ 200 |
| 4. | ಜಾಫ್ರಾ* | ರೂ 100 |
| 5. | ಕಸ್ತೂರಿ* | ರೂ 100 |
| 6. | ಸಹಸ್ರಕಲಶಾಭಿಷೇಕ | ರೂ 3500 |
| 7. | ತಿರುಪ್ಪಾವಡಾ[2] | ರೂ 5000 |
| 8. | ಕೋಯಿಲ್ ಆಳ್ವಾರ್ ತಿರುಮಂಜನ | ರೂ 3000 |
| 9. | ಸಹಸ್ರದೀಪಾಲಂಕಾರ ಸೇವೆ | ರೂ 2000 |

### ಉತ್ಸವಗಳು

| | |
|---|---|
| ಪುಷ್ಪಯಾಗ | ರೂ 3500 |
| ವಸಂತೋತ್ಸವ | ರೂ 3000 |
| ಕಲ್ಯಾಣೋತ್ಸವ | ರೂ 2000 |
| ಬ್ರಹ್ಮೋತ್ಸವ | ರೂ 1000 |
| ತೆಪ್ಪೋತ್ಸವ[2] | ರೂ 2500 |
| ಪವಿತ್ರೋತ್ಸವ | ರೂ 5000 |

### ವಾಹನಗಳು

| | |
|---|---|
| ಬಂಗಾರದ ಗರುಡ, ಕಲ್ಪವೃಕ್ಷ, ಸೂರ್ಯಪ್ರಭ, ಸರ್ವಭೂಪಾಲ, ಪ್ರತಿ ಒಂದಕ್ಕೆ | ರೂ 125 |
| ಬೆಳ್ಳಿಯ ಗರುಡ, ಚಿಕ್ಕಶೇಷ, ಚಂದ್ರಪ್ರಭ, ಗಜ, ತುರಗ, ಹಂಸ, ಹನುಮಂತ ಪ್ರತಿ ಒಂದಕ್ಕೆ | ರೂ 100 |

1. ಆಮಂತ್ರಣೋತ್ಸವಕ್ಕೆ ಇಬ್ಬರಿಗೆ ಮಾತ್ರ ಪ್ರವೇಶ.

* 2,3,4,5,6, ಸೇವೆಗಳಿಗೆ ಒಬ್ಬರಿಗೆ ಮಾತ್ರ ಪ್ರವೇಶ.

2. ಈ ಸೇವೆಗಳಲ್ಲಿ ಐದು ಗ್ರಾಂನ ಚಿನ್ನದ ಪದಕವನ್ನು ಬಹೂಕರಿಸಲಾಗುವುದು.

ವಿವರಗಳಿಗೆ: **ಪೇಷ್ಕಾರ್, ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ, ತಿರುಮಲೆ** ಇವರಿಗೆ ಬರೆಯಿರಿ

ಅಥವಾ **ತಿರುಮಲೆಯ ವಿಜಯಾ ಬ್ಯಾಂಕಿನಲ್ಲಿ** ವಿಚಾರಿಸಿ

---

# ತಿರುಮಲೆ ತಿರುಪತಿಗಳಲ್ಲಿ ವಸತಿ ಸೌಲಭ್ಯ

### ತಿರುಮಲೆ

| | | |
|---|---|---|
| ವಿಶೇಷ ರೀತಿಯ ಕಾಟೇಜುಗಳು | ದಿನವೊಂದಕ್ಕೆ | ರೂ 75–00 |
| ಟಿ.ಬಿ.ಸಿ ಒಳಗಿನ ಕಾಟೇಜುಗಳು | ” | ರೂ 50–00 |
| ಎಸ್. ವಿ. ಅತಿಥಿಗೃಹ ತಿರುಮಲೆ | | |
| ಅ) ದೊಡ್ಡ ಕೋಣೆಗಳು | ,, | ರೂ 50–00 |
| ಆ) ಮೂಲೆಯ ಕೋಣೆಗಳು | ,, | ರೂ 40–00 |
| ಇ) ಕಿರಿಯ ಕೋಣೆಗಳು | ,, | ರೂ 35–00 |
| ಎಚ್. ಆರ್. ಜಿ. ಕಾಟೇಜು | ,, | ರೂ 150–00 |
| <u>ಮದುವೆಯ ಹಾಲ್‌ಗಳು</u> | | |
| ರೂಯಾ ಕಾಟೇಜು | ,, | ರೂ 80–00 |
| ಗೋಗಿನೇನಿ ಕಾಟೇಜು | ,, | ರೂ 80–00 |
| ಸಿ.ಸಿ. ಕಾಟೇಜು | ,, | ರೂ 100–00 |
| ಎಸ್.ಎಂ.ಸಿ. ಪೂರ್ವ ನಂ. 9 | ,, | ರೂ 50–00 |
| ಎ.ಟಿ.ಸಿ. ನಂ. 39 | ,, | ರೂ 80–00 |
| ಶಂಖುಮಿಟ್ಟ ಕಾಟೇಜುಗಳು (ಪೂರ್ತಿ) | | ರೂ 20–00 |
| ಶೇಷಾದ್ರಿನಗರ ,, | ,, | ರೂ 20–00 |
| ಅಂಜನಾದ್ರಿನಗರ ,, | ,, | ರೂ 20–00 |
| ಗರುಡಾದ್ರಿನಗರ ,, | ,, | ರೂ 20–00 |

ವಿವರಗಳಿಗೆ: ರಿಸೆಪ್ಷನ್ ಆಫೀಸರ್, ಟಿ.ಟಿ.ಡಿ. ತಿರುಮಲೆ

### ತಿರುಪತಿ

| | |
|---|---|
| ಶ್ರೀನಿವಾಸ ಸತ್ರ ಎರಡು ಹಾಸಿಗೆಗಳಕೋಣೆ | ರೂ 20–00 |
| ನಾಲ್ಕು ” | ರೂ 25–00 |
| ಒಂದು ” | ರೂ 15–00 |
| ಶ್ರೀ ಪದ್ಮಾವತಿ ಅತಿಥಿಗೃಹ | |
| ಹವಾನಿಯಂತ್ರಿತ 2 ಹಾಸಿಗೆಗಳ ಕೋಣೆ | ರೂ 50–00 |
| ,, ಒಂದು ಹಾಸಿಗೆಯ ಕೋಣೆ | ರೂ 30–00 |
| ಶ್ರೀ ವೆಂಕಟೇಶ್ವರ ಅತಿಥಿಗೃಹ | |
| ಎರಡು ಹಾಸಿಗೆಗಳ ಕೋಣೆ | ರೂ 20–00 |

ವಿವರಗಳಿಗೆ : ರಿಸೆಪ್ಷನ್ ಆಫೀಸರ್, ಟಿ.ಟಿ.ಡಿ. ತಿರುಪತಿ.

ತಿರುಮಲೆ–ತಿರುಪತಿಗಳಲ್ಲಿನ ವಸತಿಯನ್ನು ಕಾಯ್ದಿರಿಸಬಹುದು. ಆಯಾ ವಸತಿಸೌಕರ್ಯಕ್ಕೆ ಅನುಗುಣವಾದ ಹಣದ ಡಿ. ಡಿ. ಯನ್ನು ಕಳುಹಿಸುವಾಗ ಅಂಚೆ ವಿಳಾಸ ಹಾಗೂ ಅಪೇಕ್ಷಿತ ವಸತಿ ಸೌಕರ್ಯದ ವಿವರಗಳನ್ನು ಸ್ಪಷ್ಟವಾಗಿ ಇಂಗ್ಲೀಷಿನಲ್ಲಿ ಬರೆಯಿರಿ. ಅಪೇಕ್ಷಿತ ವಸತಿ ಸೌಕರ್ಯ ಲಭ್ಯವಿಲ್ಲದಾಗ ಇತರೆ ವಸತಿಯನ್ನು ಕಾಯ್ದಿರಿಸಿ ಹೆಚ್ಚಿನ ಹಣವನ್ನು ನೀವು ಇಲ್ಲಿ ಬಂದಾಗ ಹಿಂದಿರುಗಿಸಲಾಗುವುದು. ಕಾಯ್ದಿರಿಸಿದ ಬಗ್ಗೆ ಪತ್ರವನ್ನು ಕಳುಹಿಸಲಾಗುತ್ತದೆ, ಅದನ್ನು ತೆಗೆದುಕೊಂಡೇ ತಿರುಪತಿ; ತಿರುಮಲೆಗಳಿಗೆ ಬನ್ನಿರಿ. ಅಂಚೆಯಲ್ಲಿನ ವಿಳಂಬಕ್ಕೆ ತಿ.ತಿ.ದೇ. ಹೊಣೆಯಲ್ಲ. ಮೀಸಲಾತಿಯ ಹಕ್ಕು ತಿ.ತಿ.ದೇ. ಗಳದ್ದು.

ತಿರುಮಲೆ ತಿರುಪತಿ ದೇವಸ್ಥಾನಗಳು.

# ಕರ್ನಾಟಕದಲ್ಲಿ

## ಬೆಂಗಳೂರಿನಲ್ಲಿ ಶ್ರೀಕೃಷ್ಣ ಜಯಂತಿ ಉತ್ಸವ

ಬೆಂಗಳೂರಿನ ಶ್ರೀರಾಮಪುರದಲ್ಲಿರುವ ಶ್ರೀ ಗೀತಾಮಂದಿರದಲ್ಲಿ ದಿನಾಂಕ 31-8-83 ಬುಧವಾರದಿಂದ ದಿನಾಂಕ 2-9-83 ಶುಕ್ರವಾರ ಪರ್ಯಂತ ಮೂರುದಿನಗಳ ಕಾಲ ಶ್ರೀಕೃಷ್ಣ ಜಯಂತಿ ಕಾರ್ಯಕ್ರಮಗಳು ಯಶಸ್ವಿಯಾಗಿ ನಡೆದವು.

31 ರ ಬೆಳಗ್ಗೆ ಕರ್ನಾಟಕ ರಾಜ್ಯ ಪ್ರವಾಸೋದ್ಯಮ ನಿಗಮದ ಅಧ್ಯಕ್ಷ ಶ್ರೀ ಕೆ. ಜಿ. ಶ್ರೀನಿವಾಸ ಮೂರ್ತಿಯವರು ಭಗವದ್ಗೀತಾ ಪಾರಾಯಣದ ಕಾರ್ಯಕ್ರಮದ ಮುಖ್ಯ ಅತಿಥಿಗಳಾಗಿ ಭಾಗವಹಿಸಿ "ಮನಸ್ಸಿಗೆ ಶಾಂತಿಸಮಾಧಾನಗಳನ್ನು ತರುವ ಗೀತಾ ಪಾರಾಯಣಾದಿ ಕಾರ್ಯಕ್ರಮಗಳು ಹೆಚ್ಚು ಅಗತ್ಯವೆಂದು" ತಿಳಿಸಿದರು. ಶ್ರೀ ನಂಜಪ್ಪ ಸ್ವಾಮಿಗಳು ಅಧ್ಯಕ್ಷರಾಗಿದ್ದ ಗೀತಾ ಪಾರಾಯಣ ಕಾರ್ಯಕ್ರಮದಲ್ಲಿ ಶ್ರೀ ಕೃಷ್ಣಯ್ಯ ಶೆಟ್ಟರು ಸ್ವಾಗತಿಸಿದರು. ಗೀತಾಮಂದಿರದ ಗೌರವ ಕಾರ್ಯದರ್ಶಿ ಶ್ರೀ ಸಿ. ಜಿ. ಸಿದ್ದಯನವರು ವಂದಿಸಿದರು.

ಅಂದು ಸಂಜೆ ಸಂತ ಶ್ರೀ ರಾಮಸ್ವಾಮಿಜೀ ಅವರಿಂದ ಅಖಂಡ ದೀಪಾರಾಧನೆ ಕಾರ್ಯಕ್ರಮ ಆರಂಭವಾಯಿತು. ಮೂರುದಿನಗಳಲ್ಲೂ ಸಂತ ಶ್ರೀ ಭದ್ರಗಿರಿ ಅಚ್ಯುತದಾಸರು ಹಾಗೂ ಶ್ರೀಮತಿ ಸುಭದ್ರಾ ಪಾರ್ಥಸಾರಥಿಯವರುಗಳು ಹರಿಕಥೆ ಮಾಡಿದರು.

## ವಿನಾಯಕ ಮಹೋತ್ಸವ ಸಾಮೂಹಿಕ ವಿವಾಹ

ಕೋಲಾರದ ವಿಶ್ವಹಿಂದೂ ಪರಿಷತ್ ಶಾಖೆ ಸತತವಾಗಿ ಹದಿಮೂರು ವರ್ಷಗಳಿಂದ ನಗರದಲ್ಲಿ ವಿನಾಯಕ ಮಹೋತ್ಸವವನ್ನು ನಡೆಸಿಕೊಂಡು ಬಂದಿದ್ದು ಈ ವರ್ಷವೂ ಸರಳವಾಗಿ, ಹೆಚ್ಚು ಜನವನ್ನು ಮುಟ್ಟುವಂತಹ ಸಾರ್ವಜನಿಕ ಕಾರ್ಯಕ್ರಮಗಳಿಂದ ಕೂಡಿದಂತೆ ವಿನಾಯಕ ಮಹೋತ್ಸವವನ್ನು ಆಚರಿಸಿತು.

ಐದು ದಿನಗಳ ಕಾಲ ಹರಡಿಕೊಂಡ ಕಾರ್ಯಕ್ರಮಗಳಿಂದ ಕೂಡಿದ ಉತ್ಸವ ನಗರದ ಚಿಂದಲೂರು ವೆಂಕಟಪ್ಪ ಶೆಟ್ಟರ ಕಲ್ಯಾಣ ಮಂಟಪದಲ್ಲಿ 10-9-83ರ ಪ್ರಾತಃಕಾಲ ವಿನಾಯಕ ಪ್ರಾಣ ಪ್ರತಿಷ್ಠೆಯೊಂದಿಗೆ ಆರಂಭವಾಗಿ ಅಂದು ಮಧ್ಯಾಹ್ನ ಶ್ರೀ ಶ್ರೀ ಮದ್ಧನಲಿಂಗ ಚಕ್ರವರ್ತಿ ನೀಲಕಂಠ ಶಿವಾಚಾರ್ಯಸ್ವಾಮಿಗಳ ನೇತೃತ್ವದಲ್ಲಿ ಆಸ್ಪತ್ರೆಯ ರೋಗಿಗಳಿಗೆ ವಿನಾಯಕ ಪೂಜಾ ಪ್ರಸಾದ, ಹಣ್ಣುಗಳ ಹಂಚುವಿಕೆಯಿಂದ ಮುಂದುವರೆಯಿತು. ಭಾದ್ರಪದ ಶುದ್ಧ ಪಂಚಮಿಯಂದು ಸಂಜೆ ಶ್ರೀ ಚಿನ್ಮಯ ಮಹಿಳಾಮಂಡಳಿಯವರಿಂದ ಸಾಮೂಹಿಕ ಭಜನೆಯ ನಂತರ ಶ್ರೀ ಎನ್. ವಿ. ಗೋವಿಂದರಾಜನ್ ಅವರು 'ಕನ್ನಡ ಕವಿಗಳು ಕಂಡ ಗಣೇಶ'ನ ಬಗ್ಗೆ ಉಪನ್ಯಾಸ ನೀಡಿದರು.

ಮೂರನೆಯ ದಿನ ಶಿವಶರಣೆ ಬಿ. ಎಚ್. ದಾಕ್ಷಾಯಣಮ್ಮ ಅವರ ಭಾವಗೀತೆಗಳ ನಂತರ ರಸಿಕ ಪುತ್ತಿಗೆ ಅವರು 'ಗಣೇಶತತ್ತ್ವ'ದ ಬಗ್ಗೆ ಉಪನ್ಯಾಸ ಮಾಡಿದರು.

ಮಂಗಳವಾರದಂದು ಸಂಜೆ ಚಿನ್ಮಯ ವಿದ್ಯಾಲಯದ ಮಕ್ಕಳಿಂದ ಗೀತಾಪಠಣ ಹಾಗೂ ಭಜನೆಗಳು ನಡೆದು ಶ್ರೀ ಬಿ. ಅಶ್ವತ್ಥನಾರಾಯಣ ರಾವ್ ಅವರು, 'ಗಣೇಶ ಅಥರ್ವ ಶೀರ್ಷ' ವಿಷಯದ ಬಗ್ಗೆ ಉಪನ್ಯಾಸ ಮಾಡಿದರು.

ಬುಧವಾರ ವಿನಾಯಕ ಮಹೋತ್ಸವದ ಮುಖ್ಯ ಅಂತಿಮ ಘಟ್ಟ. ಅಂದು ಪರಿಷತ್ತಿನ ವತಿಯಿಂದ ಸಾಮೂಹಿಕ ವಿವಾಹಗಳನ್ನು ಏರ್ಪಡಿಸಲಾಗಿದ್ದಿತು. ಚರಮೂರ್ತಿ ಶ್ರೀ ಶ್ರೀ ಶಿವರುದ್ರಸ್ವಾಮಿಗಳು ಮದುವೆಯಲ್ಲಿ ಕಡಮೆ ಖರ್ಚು ಮಾಡಲು ಕರೆನೀಡುತ್ತ, ಪರಿಷತ್ತು ನಡೆಸುತ್ತಿರುವ ಈ 'ಸಾಮೂಹಿಕ ವಿವಾಹಗಳು ಸಮಾಜದಲ್ಲಿ ಸೌಹಾರ್ದವನ್ನು ಹೆಚ್ಚಿಸುವುದೆಂದೂ ಆರ್ಥಿಕ ಸಮತೋಲನವನ್ನು ಕಾಯ್ದುಕೊಂಡು ಬರಲು ನೆರವಾಗುವುದೆಂದೂ' ನುಡಿಯುತ್ತ ವಧೂವರರನ್ನು ಆಶೀರ್ವದಿಸಿದರು.

ಸಾಮೂಹಿಕ ವಿವಾಹಗಳಿಗೆ ಸಾರ್ವಜನಿಕರಿಂದ ವಂತಿಗೆಗಳನ್ನು ಸ್ವೀಕರಿಸಲಾಗಿದ್ದು ಪರಿಷತ್ತಿಗೆ ನಗರದ ನಾಗರಿಕರು ಎಲ್ಲರೀತಿಯ ನೆರವನ್ನು ನೀಡಿದ್ದರು. ವಿವಾಹಗಳ ಅಂಗವಾಗಿ ಅನ್ನದಾನದ ಏರ್ಪಾಡೂ ಆಗಿದ್ದಿತು.

ಅಂದು ಸಂಜೆ ಮಂಗಳವಾದ್ಯಗಳೊಡನೆ ಶ್ರೀ ಗಣಪತಿಯ ವಿಸರ್ಜನಾ ಮೆರವಣಿಗೆಯಲ್ಲಿ ಕೀಲುಕೋಟೆಯ ಶತಶೃಂಗ ಭಜನಾಮಂಡಳಿಯವರಿಂದ ಪಂಡರಿಭಜನೆ ಕೋಲಾಟ, ಶ್ರೀ ಮಾರುತಿಯವರಿಂದ ಆಂಜನೇಯ ಪಾತ್ರಗಳು ಏರ್ಪಾಡಾಗಿದ್ದವು.

## ಶ್ರೀ ಮನ್ಮಹಾಭಾರತ ಸಂ-೨೭ ಬಿಡುಗಡೆ

ಈಚೆಗೆ ಭಾರತದರ್ಶನ ಪ್ರಕಾಶನದವರು ಶ್ರೀ ಮನ್ಮಹಾಭಾರತದ 27 ನೇ ಸಂಪುಟವನ್ನು ಬೆಂಗಳೂರಿನಲ್ಲಿ ಬಿಡುಗಡೆ ಮಾಡಿದರು.

ಬೆಂಗಳೂರಿನ ಶಂಕರಪುರದ ಶ್ರೀ ಶಂಕರಮಠದಲ್ಲಿ ಏರ್ಪಡಿಸಿದ್ದ ಸರಳ ಸಮಾರಂಭದಲ್ಲಿ ಶ್ರೀ ಶ್ರೀ ಮದಭಿನವ ವಿದ್ಯಾತೀರ್ಥ ಸ್ವಾಮೀಜಿ ಹಾಗೂ ಶ್ರೀ ಶ್ರೀ ಭಾರತೀ ತೀರ್ಥ ಸ್ವಾಮೀಜಿಗಳವರ ಸಮ್ಮುಖದಲ್ಲಿ ಈ ಪುಸ್ತಕ ಬಿಡುಗಡೆಯಾಯಿತು. ಪ್ರಕಾಶನ ಸಂಸ್ಥೆಯ ಅಧ್ಯಕ್ಷ ಶ್ರೀ ಎಚ್. ಎಸ್. ವರದದೇಶಿಕಾಚಾರ್ಯ ರಂಗಪ್ರಿಯ ಅವರು 27ನೇ ಸಂಪುಟವನ್ನು ಕುರಿತು ಮಾತನಾಡಿದರು.

ಭಾರತ ದರ್ಶನ ಪ್ರಕಾಶನ ಸಂಸ್ಥೆಯವರು ವ್ಯಾಸಕೃತ ಸಂಸ್ಕೃತ ಮಹಾಭಾರತವನ್ನು 640



ವಧೂವರರನ್ನೂ ಆಶೀರ್ವದಿಸುತ್ತಿರುವ ಹಿರಿಯರು. ಶ್ರೀ ಶ್ರೀ ಸಿದ್ದಲಿಂಗ ಸ್ವಾಮೀಜಿ, ಶ್ರೀ ಶ್ರೀ ಶಿವರುದ್ರಸ್ವಾಮೀಜಿ, (ಬೇಲಿಮಠ) ಹಾಗೂ ಶ್ರೀ ಶ್ರೀ ಕರಿಬಸವ ಸ್ವಾಮೀಜಿ (ನರಗುಂದ ಮಠ)

# ವಾರ್ತಾಲಹರಿ

ಪುಟಗಳ 30 ಸಂಪುಟಗಳಲ್ಲಿ ಕನ್ನಡದಲ್ಲಿ ಭಾಷಾಂತರಿಸಿ ಪ್ರಕಟಿಸಲು ಉದ್ದೇಶಿಸಿ ಈಗಾಗಲೇ 26 ಸಂಪುಟಗಳನ್ನು ಹೊರತಂದಿರುತ್ತಾರೆ. 27 ನೆಯ ಸಂಪುಟವು ಈಚೆಗೆ ಶ್ರೀ ಶಂಕರಮಠದಲ್ಲಿ ಉಭಯ ಶ್ರೀ ಶ್ರೀ ಗಳವರ ಸಮ್ಮುಖದಲ್ಲಿ ಪ್ರಕಾಶನವಾಯಿತು. ಈ ಸಂಪುಟವೂ ಅನುಶಾಸನಪರ್ವವನ್ನೇ ಒಳಗೊಂಡಿದ್ದು ಮುಂದಿನ ಸಂಪುಟದಲ್ಲಿಯೂ ಅನುಶಾಸನಪರ್ವವೇ ಮುಂದುವರಿಯುವುದೆಂದು ಹೇಳಲಾಗಿದೆ. ಹಾಕಿಕೊಂಡಿದ್ದ ಯೋಜನೆಗಿಂತ ಒಂದು ಅಥವಾ ಎರಡು ಸಂಪುಟಗಳು ಹೆಚ್ಚಾಗಬಹುದೆಂದು ಪ್ರಕಾಶಕರು ಭಾವಿಸಿದ್ದಾರೆ. ಪೂರ್ಣಮಾಲೆಗೆ ಗ್ರಾಹಕರಾಗುವವರಿಗೆ ಕೆನರಾ, ಸಿಂಡಿಕೇಟ್, ಕರ್ನಾಟಕ, ಕಾರ್ಪೋರೇಷನ್, ನ್ಯಾಷನಲ್ ಕೋ-ಆಪರೇಟಿವ್ ಬ್ಯಾಂಕ್ ಮತ್ತು ಸರ್ ಎಂ. ವಿಶ್ವೇಶ್ವರಯ್ಯ ಕೋ-ಆಪರೇಟಿವ್ ಬ್ಯಾಂಕುಗಳು ಸುಲಭ ಕಂತಿನ ಸಾಲವನ್ನು ಕೊಡುತ್ತವೆ. 30 ಸಂಪುಟಗಳ ಪೂರ್ಣಮಾಲೆಯ ಚಂದಾ ಹಣ ಸಾಧಾರಣ ಪ್ರತಿಗಳಿಗೆ 270– ರೂ.ಗಳು. ಕ್ಯಾಲಿಕೋ ಪ್ರತಿಗಳಿಗೆ 330– ರೂ. ಗಳು. 27 ನೇ ಸಂಪುಟದ ಪ್ರಕಾಶನಾತ್ಪೂರ್ವ ಬೆಲೆ ಸಾಧಾರಣ ಪ್ರತಿ 11– ರೂ. ಗಳು. ಕ್ಯಾಲಿಕೋ ಪ್ರತಿ 13– ರೂ.ಗಳು. ಕನ್ನಡ ಬಾಂಧವರು ಇದರ ಸದುಪಯೋಗವನ್ನು ಪಡೆದುಕೊಳ್ಳಬಹುದಾಗಿದೆ.

## ದಾಸಸಾಹಿತ್ಯ ವಸ್ತು ಪ್ರದರ್ಶನ

ಈಚೆಗೆ ಹೈದರಾಬಾದಿನ ಬಾಗಲಿಂಗಂಪಲ್ಲಿಯ ರಾಘವೇಂದ್ರಸ್ವಾಮಿ ಮಠದಲ್ಲಿ ತಿ.ತಿ. ದೇವಸ್ಥಾನಗಳ ದಾಸಸಾಹಿತ್ಯ ಪ್ರಾಜೆಕ್ಟ್‌ನವರ ವಸ್ತು ಪ್ರದರ್ಶನ ಮೂರುದಿನಗಳ ಕಾಲ ಯಶಸ್ವಿಯಾಗಿ ನಡೆಯಿತು.

ಆಂಧ್ರಪ್ರದೇಶ ಸರ್ಕಾರದ ಮುಖ್ಯ ಕಾರ್ಯದರ್ಶಿ ಶ್ರೀ ಕೆ ರಾಮಕೃಷ್ಣ ಅವರು ವಸ್ತು ಪ್ರದರ್ಶನವನ್ನು ಉದ್ಘಾಟಿಸುತ್ತ ಮಾತನಾಡಿ ಇಂದಿನ ಯುಗದಲ್ಲಿ ಧರ್ಮಪ್ರಸಾರದ ಅಗತ್ಯ ಹೆಚ್ಚಾಗಿ ಇದೆ, ಎಂದು ತಿಳಿಸುತ್ತ, ದಾಸಸಾಹಿತ್ಯ ಪ್ರಾಜೆಕ್ಟ್‌ನ ವಸ್ತು ಪ್ರದರ್ಶನದ ವಿವಿಧ ಚಿತ್ರಗಳು, ಹಲವು ಭಾಷೆಗಳಲ್ಲಿ ವಿವರಣೆ ಹೊಂದಿರುವುದರ ಬಗ್ಗೆ ಸಂತಸ ವ್ಯಕ್ತ ಪಡಿಸುತ್ತ 'ಈ ವಸ್ತು ಪ್ರದರ್ಶನ ಭಾರತಯಾತ್ರೆ ಮಾಡಬೇಕು' ಎಂದು ಹಾರೈಸಿದರು. ದೇವಾದಾಯ ಇಲಾಖಾ ಕಮೀಷನರ್ ಶ್ರೀ ಮುರಳೀಧರ್ ಅವರು ಮಾತನಾಡುತ್ತ ತಿ. ತಿ ದೇ. ಗಳ ಹಿಂದೂಧರ್ಮ ರಕ್ಷಣ ಸಂಸ್ಥೆ ಧರ್ಮಪ್ರಸಾರವನ್ನು ಉತ್ತಮರೀತಿಯಲ್ಲಿ ಮಾಡುತ್ತಿದೆಯೆಂದೂ ದಾಸಸಾಹಿತ್ಯ ಪ್ರಾಜೆಕ್ಟ್ ಈ ದಿಸೆಯಲ್ಲಿ ಶ್ರೀ ಸಾಮಾನ್ಯನ ಬಳಿಗೆ ಧರ್ಮವನ್ನು ವಸ್ತು ಪ್ರದರ್ಶನದ ಮೂಲಕ ಕೊಂಡೊಯ್ಯುತ್ತಿರುವುದು ಅಭಿನಂದನೀಯವೆಂದೂ ನುಡಿದರು. ವಸ್ತು ಪ್ರದರ್ಶನದಲ್ಲಿ ವಿವಿಧ ಕಾರ್ಯಕ್ರಮಗಳೂ ಏರ್ಪಾಡಾಗಿದ್ದವು

ಮಳಗಿ ಜಯತೀರ್ಥಾಚಾರ್ ಅವರು ದಾಸ ಸಾಹಿತ್ಯದಲ್ಲಿ ಸಾಮಾಜಿಕ ಕಳಕಳಿ ಎಂಬ ಬಗ್ಗೆ ಉಪನ್ಯಾಸಮಾಡಿದರು. ವಾಣಿಶ್ರೀ ರಾಜಶ್ರೀ ಸೋದರಿಯರು ಉತ್ತರಾದಿ ಸಂಗೀತದಲ್ಲಿ ದಾಸರ ಕೃತಿಗಳನ್ನು ಹಾಡಿ ರಂಜಿಸಿದರು. ಕುಮಾರಿ ಆಲೂರು ನಾಗರತ್ನ ಅವರು ದಾಸರ ಕೃತಿಗಳಲ್ಲಿನ ವೆಂಕಟೇಶ್ವರ ಕಲ್ಯಾಣ, ಕೃಷ್ಣಲೀಲೆಗಳ ಬಗ್ಗೆ ಗಮಕ ಮಾಡಿದರು.

ಮೂರು ದಿನಗಳ ವಸ್ತು ಪ್ರದರ್ಶನ ಕಾರ್ಯಕ್ರಮ ಶ್ರೀ ಕೆ. ಅಪ್ಪಣ್ಣಾಚಾರ್ಯ ಅವರ ನಿರ್ದೇಶನದಲ್ಲಿ ನಡೆಯಿತು

## ರಕ್ಷಾಪತ್ರ ಸೂಚಿ

ಮುಖಪುಟ. ತಿರುಮಲೆಯಲ್ಲಿ ಶ್ರೀ ವೆಂಕಟೇಶ್ವರಸ್ವಾಮಿ ಪುಷ್ಪಯಾಗ.

ಹಿಂಬದಿಯ ಪುಟ: ತಿ. ತಿ ದೇ. ಉಪವನ ವಿಭಾಗದ ಪುಷ್ಪೋದ್ಯಾನ.

ಒಳಗಡೆ: ಸೆಪ್ಟಂಬರ್ 1983 ರ ಶ್ರೀ ವೆಂಕಟೇಶ್ವರಸ್ವಾಮಿ ಬ್ರಹ್ಮೋತ್ಸವ ಚಿತ್ರಗಳು ಹಾಗೂ ಅದರಲ್ಲಿ ಆಂಧ್ರಪ್ರದೇಶ್ ಸರಕಾರದ ಪರಿಯಿಂದ ಭಾಗವಹಿಸಿದ ಮುಖ್ಯ ಮಂತ್ರಿ ಶ್ರೀ ಎನ್. ಟಿ. ರಾಮಾರಾವ್. ★

## ಪಾಪವಿನಾಶನಂ ರಸ್ತೆಯ ಬಂದ್

ಅತಿಹೆಚ್ಚಿನ ಮಳೆಯಿಂದಾಗಿ ಪಾಪ ವಿನಾಶಿನಿ ಅಣೆಕಟ್ಟೆಗೆ ಹೆಚ್ಚಿನ ನೀರು ಬಂದಿರುವುದರಿಂದಾಗಿ ಪಾಪವಿನಾಶಿನಿಗೆ ಹೋಗುವ ದಾರಿಯಲ್ಲಿನ ರಸ್ತೆ ಸೇತುವೆ ಮುಳುಗುವ ಪರಿಸ್ಥಿತಿ ಉಂಟಾಗಿದ್ದುದರಿಂದ ಆ ರಸ್ತೆಯಲ್ಲಿ ವಾಹನ ಸಂಚಾರವನ್ನು ಅನಿರ್ದಿಷ್ಟ ಕಾಲ ಬಂದ್ ಮಾಡಲಾಗಿದೆ ಎಂದು ವರದಿಗಳು ತಿಳಿಸುತ್ತವೆ. ನೀರಿನಮಟ್ಟ ಕಡಿಮೆಯಾಗುವವರೆಗೆ ಯಾತ್ರಿಕರು ಕಾಲುನಡಿಗೆಯಲ್ಲೂ ಪಾಪವಿನಾಶಿನಿಯ ಜಲಪಾತದತ್ತ ಹೋಗುವ ಪ್ರಯತ್ನವನ್ನು ಕೈಬಿಡಬೇಕೆಂದು, ತಿ. ತಿ ದೇವಸ್ಥಾನಗಳ ಕಾರ್ಯನಿರ್ವಹಣಾಧಿಕಾರಿ ಶ್ರೀ ಜಿ. ಕುಮಾರಸ್ವಾಮಿ ರೆಡ್ಡಿಯವರು ಕೋರಿದ್ದಾರೆ.



ವಸ್ತು ಪ್ರದರ್ಶನದಲ್ಲಿ ಭಾಗವಹಿಸಿ ಆಸಕ್ತಿಯಿಂದ ನೋಡುತ್ತಿರುವ ಶ್ರೀ ಕೆ. ರಾಮಕೃಷ್ಣ (ಮುಖ್ಯ ಕಾರ್ಯದರ್ಶಿ, ಆಂ. ಪ್ರ.) ಮತ್ತಿತರರು.

## 1983
# ಡಿಸೆಂಬರ್ ತಿಂಗಳಿನ ಮುಖ್ಯದಿನಗಳು

| | | |
|---|---|---|
| 1 | ಗುರುವಾರ | ತಿರುಚಾನೂರು ಶ್ರೀ ಪದ್ಮಾವತೀ ಅಮ್ಮನವರ ಬ್ರಹ್ಮೋತ್ಸವಾರಂಭ, ಧ್ವಜಾರೋಹಣ. |
| 5 | ಸೋಮವಾರ | ಶ್ರೀ ಪದ್ಮಾವತೀ ಅಮ್ಮನವರ ಬ್ರಹ್ಮೋತ್ಸವ ಗಜವಾಹನ |
| 6 | ಮಂಗಳವಾರ | ಶ್ರೀ ಪದ್ಮಾವತೀ ಅಮ್ಮನವರ ಬ್ರಹ್ಮೋತ್ಸವ ಗರುಡವಾಹನ |
| 8 | ಗುರುವಾರ | ಶ್ರೀ ಪದ್ಮಾವತೀ ಅಮ್ಮನವರ ಬ್ರಹ್ಮೋತ್ಸವ ರಥೋತ್ಸವ. |
| 9 | ಶುಕ್ರವಾರ | ಶ್ರೀ ಪದ್ಮಾವತೀ ಅಮ್ಮನವರ ಬ್ರಹ್ಮೋತ್ಸವ ಅವಭೃತ. |
| 10 | ಶನಿವಾರ | ಶ್ರೀ ಕಪಿಲೇಶ್ವರಸ್ವಾಮಿ ಸನ್ನಿಧಿಯಲ್ಲಿ ಸ್ಕಂಧಷಷ್ಠಿ |
| 16 | ಶುಕ್ರವಾರ | ಗೀತಾಜಯಂತಿ |
| 18 | ಭಾನುವಾರ | ಶ್ರೀ ಕಪಿಲೇಶ್ವರಸ್ವಾಮಿ ತೆಪ್ಪೋತ್ಸವಾರಂಭ |
| 19 | ಸೋಮವಾರ | ದತ್ತಾತ್ರೇಯ ಜಯಂತಿ |
| 20 | ಮಂಗಳವಾರ | ಶ್ರೀ ಕಪಿಲೇಶ್ವರಸ್ವಾಮಿ ತೆಪ್ಪೋತ್ಸವ ಸಮಾಪ್ತಿ |
| 21 | ಬುಧವಾರ | ಆರ್ದ್ರಾ ದರ್ಶನೋತ್ಸವ (ಶ್ರೀ ಕಪಿಲೇಶ್ವರಸ್ವಾಮಿ ಸನ್ನಿಧಿ). |

ಮುಂದಿನ ಸಂಚಿಕೆಯಲ್ಲಿ .... .... ....

**ಸಪ್ತಗಿರಿ ಡಿಸೆಂಬರ್ — 1983**

**ನಾರದ ಮಹರ್ಷಿ**
– ಡಿ. ಕೃಷ್ಣ ಅಯ್ಯಂಗಾರ್

**ತಿರುಪ್ಪಾವೈ**
– ಕಂದಾಡೈ ಕೇಶವನ್

**ಶುಕಸಪ್ತತಿಯಲ್ಲಿ ರಾಮಾಯಣ**
– ವು. ಶ್ರೀನಿವಾಸಭಟ್

**ಶ್ರೀಕಂಠೇಶ್ವರಸ್ವಾಮಿ**
– ಬಿ. ಷಣ್ಮುಖಾಚಾರ್ಯ

**ಮಾತನಾಡುವ ಮೈನಹಕ್ಕಿ**
– ವಿದ್ವಾನ್ ಬ ನ. ಗುಂಡೂರಾವ್

**ನಾಥಮುನಿಗಳು**
– ಬಿ. ಎಸ್. ವಿಜಯಮ್ಮ

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.**

ಬೆಲೆ: ರೂ. 1–00 ಮಾತ್ರ

ವಿಶೇಷ ಸೂಚನೆ: ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು. ಅದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ. ವಾರ್ಷಿಕ ಚಂದಾ ರೂ. 12–00 ಮಾತ್ರ. ಬರೆಯಿರಿ.

ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್. ತಿ.ತಿ.ದೇ. ತಿರುಪತಿ.

## ಗಮನಿಕೆ

ವಿವಿಧಭಾಷೆಗಳಲ್ಲಿ ಸಪ್ತಗಿರಿಯ ಪ್ರಚಾರ, ಆಸ್ತಿಕರ ಅಭಿಮಾನಗಳು ದಿನ ದಿನ ಪ್ರವರ್ಧಮಾನವಾಗುತ್ತಿರುವುದರಿಂದ ಕೆಲವರು ಚಂದಾದಾರರಿಗೆ ಸಪ್ತಗಿರಿ ಪ್ರತಿಗಳು ಲಭಿಸದೆ ಹೋಗುತ್ತಿವೆ. ಆದ್ದರಿಂದ ಸಪ್ತಗಿರಿಯನ್ನು ಕೋರುವವರು ಕೆಳಗಿನ ಸೂಚನೆಗಳನ್ನು ಗಮನಿಸಲು ಕೋರುತ್ತೇವೆ.

* ಸಪ್ತಗಿರಿಯನ್ನು ಕೋರುವವರು ಪ್ರತಿ ತಿಂಗಳಿನಲ್ಲಿ 15 ನೆ ತಾರೀಖಿನ ಒಳಗೆ ಚಂದಾ ಹಣವನ್ನು ಕಳುಹಿಸಬೇಕು. ನಂತರ ಕಳುಹಿಸಿದವರಿಗೆ ಮಾರನೆಯ ತಿಂಗಳಿನಿಂದ ಮಾತ್ರವೇ ಪತ್ರಿಕೆ ಲಭ್ಯವಾಗುತ್ತದೆ.

* ಹೊಸ ಚಂದಾದಾರರು ಮನಿ ಆರ್ಡರ್ ಕೂಪನಿನಲ್ಲಿ 'ಹೊಸಚಂದಾ' ಎಂದು ಬರೆಯಬೇಕು. ಮಿಕ್ಕ ಚಂದಾದಾರರು ಕೂಪನಿನಲ್ಲಿ ತಮ್ಮ ಚಂದಾಸಂಖ್ಯೆಯನ್ನು ನಮೂದಿಸಬೇಕು. ಹಿಂದಿನ ಸಂಚಿಕೆಯ ತಮ್ಮ ವಿಳಾಸದ ಕಾಗದವನ್ನು ಕಳುಹಿಸಿದರೂ ಬಹಳ ಸೌಕರ್ಯವಾಗುತ್ತದೆ.

* ಸಪ್ತಗಿರಿ ಪ್ರತಿಗಳಿಗೆ ಸಂಬಂಧಿಸಿದ ಹಣವನ್ನಾಗಲಿ, ಇತರ ವಿವರಗಳಿಗಾಗಲಿ ಕೆಳಗಿನ ವಿಳಾಸಕ್ಕೆ ಮಾತ್ರವೇ ಬರೆಯಬೇಕು.

**ವೆಲ್‌ಫೇರ್ ಆಫೀಸರ್**
ಪಬ್ಲಿಕೇಷನ್ ಸೆಕ್ಷನ್
ಟಿ. ಟಿ. ಡಿ.
ತಿರುಪತಿ–517501

Edited and Published on behalf of the T. T. Devasthanams by K. Subba Rao, M. A., and Printed at T. T. D. Press by M. Vijayakumar Reddy, Manager, T. T. D. Press, Tirupati - 517 501.








THE VISIT OF ANDHRA PRADESH CHIEF MINISTER
TO TIRUMALA ON 11-9-'83.

Regd. No. H/TRP 14

వార్షిక చందా రూ. 12-00



— A Panoramic view of T. T D Gardens, Tirumala, near S. V. Guest House.